# ಮೊರೆ ಮತ್ತು ನಾನು



ಕುಡ್ಪಿ ವಾಸುದೇವ ಶೆಣೈ.



**1948**

ಪ್ರಭಾತ ಪ್ರಿಂಟರ್ಸ್, ಲಿಮಿಟೆಡ್, ಮಂಗಳೂರು ಇಲ್ಲಿ ಮುದ್ರಿಸಲ್ಪಟ್ಟು,
ಪ್ರಭಾತ ಆಫೀಸು, ರಥಬೀದಿ, ಮಂಗಳೂರು ಇಲ್ಲಿ ಪ್ರಕಟಿಸಲ್ಪಟ್ಟಿತು

ರೂ. ೧.

# ಮೀರೆ ಮತ್ತು ನಾನು

## ಅನುಕ್ರಮಣಿಕೆ




## 1948ರ ಇತರ ನಾಲ್ಕು ಪ್ರಕಟಣೆಗಳು

**(ಕುಡ್ಪಿ ವಾಸುದೇವ ಶೆಣೈ)**

ಜಪಾನ್ ಬೆಳಕು

ಹದಿನಾರು ಸಣ್ಣ ಕಥೆಗಳು

ಮಳೆಗಾಲದ ಸ್ವಪ್ನಗಳು

ಎಂಟು ವಿನೋದ ಕಥೆಗಳು

ಆಯಾಸವಿಲ್ಲದ ಒಗಟುಗಳು

ಇಪ್ಪತ್ತನಾಲ್ಕು ಹರಟೆಗಳು

ನಾರೀಶ್ವರರು

ಮತ್ತು ಇತರ ನಾಲ್ಕು ಏಕಾಂಕ ಪ್ರಹಸನಗಳು

# ಮಿೂರೆಯ ಕುರಿತು ಎರಡು ಮಾತು.

ಮಿೂರೆ, ಮಂದಜೀವನವನ್ನು ತಿದ್ದಿ ಚೇತನಕೊಡುವ ಶಕ್ತಿ. ಅವಳನ್ನು ನಾನು, ದೃಗ್ಗೋಚರವಾಗದ ಶಕ್ತಿಯ ಕಡೆಗೆ ನೋಡುವಂತೇ ನೋಡುತಿದ್ದೇನೆ

ಅವಳು ಜಗಳವಾಡದ ದಿನವಿಲ್ಲ, ಜಗಳವಿಲ್ಲದ ದಿನವು ದಿನವಲ್ಲ.

ಮಿೂರೆ, 'ಆದರ್ಶನಾರಿ ಎಂದು ಇಲ್ಲಿ ಬಂದಿಲ್ಲ ಕೇವಲ, ಪತಿಯ ಅಭಿಪ್ರಾಯವನ್ನೊಪ್ಪದೆ ತಪ್ಪಿ, ಮತ್ತೆ ತಪ್ಪದೆ ಒಪ್ಪುವ, ಆದರೆ, ಒಪ್ಪಿದೆನೆಂದು ಹೇಳಲೊಪ್ಪದ--ಸಿಡುಕಿನ ಬಾಲಿಕೆ

ಅವಳ ಮತ್ತು ನನ್ನ ನಡುವೆ 'ಚಿಕ್ಕ ಘುಟೋತ್ಕಚ'ನೂ ಬರುತ್ತಾನೆ ಈ ಚಿಕ್ಕ 'ರಾಕ್ಷಸ'ನೂ ಮಂದದಿನವನ್ನು ಥಕ್ಕನೆ ಬೆಳಗುವುದರಲ್ಲಿ ಅಲ್ಲಲ್ಲಿ ಸಹಾಯಕನಾಗುತ್ತಾನೆ

ಪ್ರತಿಯೊಂದು ಮನೆಯಲ್ಲಿ ಒಬ್ಬಳು ಮಿೂರೆಯಿಲ್ಲದಿದ್ದರೆ ಮನೆಗೆ ಶೋಭೆಯಿಲ್ಲವೆಂದು ನನ್ನ ಅಭಿಪ್ರಾಯ ಸತಿ-ಪತಿಯರೊಳಗಿನ ಶಾಂತಜೀವನವು ನೀರಸ ಅವರು ಜಗಳಾಡಬೇಕು, ಮರೆಯಬೇಕು.

ಜಗಳಾಡದ ಮಾತ್ರಕ್ಕೆ ಒಬ್ಬನು ಜಗಳವನ್ನು ಮೆಚ್ಚಲಾರನು ಎಂದೆಣಿಸಲಾಗದು ಎಲ್ಲರಿಗೂ ಒಬ್ಬೊಬ್ಬ ಮಿೂರೆ ದೊರವುದು ಸಾಧ್ಯವಿಲ್ಲವೆಂದೇ ಎಲ್ಲ ಕಡೆಗಳಲ್ಲೂ ಜಗಳಗಳಿಲ್ಲ ಆದರೆ, ಎಲ್ಲರು ಒಬ್ಬಳು ಮಿೂರೆಯೇ ತಮ್ಮನ್ನೂ ಆಳಿಕೊಂಡಿದ್ದರೆ ಚೆನ್ನಾಗಿತ್ತು ಎಂದು ಭಾವಿಸದಿರಲಾರರು ಅದೇ ರೀತಿ, ಕೆಣಕಿದರೂ ಕಾದಾಡದ ಪತಿಯೊಡನೆ ಸಂಸಾರವು ನಿಸ್ಸಾರವೆಂದು ಸಾವಿರಾರು ಮಿೂರೆಗಳೂ ಭಾವಿಸುವರು ಆದರೆ, ಮಿೂರ ಮತ್ತು ನಾನು ಕಾದಾಡುವುದಕ್ಕಿಂತ ಹೆಚ್ಚಿನ ಕಾದಾಟದಿಂದ ಶೋಭೆಯಿಲ್ಲ, ಮನೆಯೊಡೆಯಬಹುದು

ಮಿೂರೆ ಇಲ್ಲಿ ಪತಿಯ ಒಡತಿಯಲ್ಲ, ಮಿೂರಾಪತಿಯು ಪತ್ನಿದಾಸನೂ ಅಲ್ಲ ಅವರು ಎಲ್ಲದರಲ್ಲೂ ಸಮಭಾಗಿಗಳು ಪ್ರೀತಿಸಿ ಕಾದಾಡಿ, ಅದನ್ನು ಮರೆತು ಪುನಃ ಪ್ರೀತಿಸುವ ಸರ್ವಹಕ್ಕುಗಳೂ ತಮ್ಮದೆಂದು ಅವರು ಭಾವಿಸುತ್ತಾರೆ

"ಮಿೂರೆ ಮತ್ತು ನಾನು"--ಕನ್ನಡ ಕಥಾ ಪ್ರಪಂಚದಲ್ಲಿ ಹೊಸ ಪ್ರಯೋಗ ಮೊದಲನೆ ಮಿೂರಾ ಕಥೆಯು 1932ರಲ್ಲಿ ಪ್ರಕಟವಾಯಿತು ಅಂದಿನಿಂದ ನೂರಾರು ಮಿೂರೆಗಳು ನಾನಾ ಹೆಸರು ಧರಿಸಿ ಜನನಕ್ಕೆ ಬಂದಿರುವರು ಮಿೂರಾ ಕಥೆಗಳ ಅನುಕರಣವೇ ಮಿೂರೆಯ ಅಸ್ತಿತ್ವದ ಅರ್ಹತೆಯನ್ನು ತೋರಿದೆ

ಇಲ್ಲಿ ಸಂಗ್ರಹಿಸಿಕೊಟ್ಟಿರುವ ಕಥೆಗಳಲ್ಲಿ ಹದಿನಾರು ವರ್ಷಗಳ ಹಿಂದೆ ಬರೆದ ಕಥೆಯೂ ಇದೆ, ಕಳೆದ ವರ್ಷ ಬರೆದ ಕಥೆಯೂ ಇದೆ ಅವುಗಳ ಕ್ರಮವೂ ತಪ್ಪಿ, 1932ರಲ್ಲಿ ಬರೆದ ಕಥೆಯು ಹನ್ನೊಂದನೇ ಕಥೆಯಾಗಿ ಬಂದುದುಂಟು, 1947ರ ಕಥೆಯು ಆ ಮೊದಲೇ ಬಂದುದುಂಟು ಅದೊಂದು ಕ್ರಮವಾದ ಸರಪಣಿಯಲ್ಲ.

ಬೇರೆ ಬೇರೆ ವರ್ಷಗಳಲ್ಲಿ ಪ್ರಕಟವಾದ ಎಲ್ಲ ಮಿೂರಾ ಕಥೆಗಳು ನನಗೆ ದೊರೆತಿಲ್ಲ. ದೊರೆತಾಗ ದ್ವಿತೀಯ ಭಾಗವಾಗಿ ಅವುಗಳನ್ನು ಪ್ರಕಟಿಸಬೇಕೆಂದಿದ್ದೇನೆ.

—ಕುಡ್ಪಿ ವಾಸುದೇವ ಶೆಣೈ.

# ಮೋರೆ ಮತ್ತು ನಾನು

## ೧. ಬಡವರ ಮನೆಯ ಲಕ್ಷ್ಮಿ

ಪ್ರಪಂಚದ ಎಲ್ಲ ಯಾಂತ್ರಿಕ ಅದ್ಭುತಗಳಲ್ಲಿ ನನಗೆ ಗಡಿಯಾರದ ಮೇಲೆ ವಿಶೇಷ ಮೆಚ್ಚುಗೆ ಅದನ್ನು ಮಮತೆಯಿಂದ ಗಂಟೇ ವರೆಗೆ ನೋಡುತ್ತ ನನ್ನನ್ನೆ ನಾನು ಮರೆತುದಿದೆ ಎಲ್ಲ ಗಡಿಯಾರಗಳಲ್ಲಿ ನನಗೆ ನಮ್ಮ ಮನೆಯ ದೊಡ್ಡ ಗಡಿಯಾರದ ಮೇಲೆ ವಿಶೇಷ ಮಮತೆ; ಅದನ್ನು ಮೋರೆಯ ಅಪ್ಪನು, ಮುನ್ನೂರು ರೂಪಾಯಿ ವರದಕ್ಷಿಣೆ ಬದಲಿಗೆ ನನಗೆ ಕೊಟ್ಟು,—ನನ್ನ ಮುಂದಿನ ತಲಾಂತರಗಳ ವರೆಗೂ ಕಾಪಾಡಿಕೊಂಡು ಬರುವಂತೆ ಸುಮಾರು ಐನೂರು ರೂಪಾಯಿ ಬೆಲೆಯ ಭಾಷಣವನ್ನೂ ಮಾಡಿದ್ದನು.

"ಲಕ್ಷ್ಮಿ" ಎಂದು ಅದರ ಹೆಸರು! ಗುಣದಲ್ಲಿಯೂ ರೂಪದಲ್ಲಿಯೂ "ಲಕ್ಷ್ಮಿ"ಯು ಲಕ್ಷ್ಮಿಯೆ. ಎಂಟಂಗುಲದ ಮುಖ ನಮ್ಮ "ಲಕ್ಷ್ಮಿ"ಯದು. ಅದರ ಮೇಲೆ "IV" ಎಂದಿರುವಲ್ಲಿ ಕಾಲಾಣೆ ಗಾತ್ರದಷ್ಟು ಎಣ್ಣೆಯ ಗುರುತು; VIII ಮತ್ತು IXಗಳ ನಡುವೆ ಪುನಃ ಅರ್ಧಾಣೆ ಗಾತ್ರದ ಗುರುತು ಅನಂತರ XII ಇರುವಲ್ಲಿ ಒಂದು ಗುರುತು.

ಮಿನಿಟಿನ ಕೈಯು ಹನ್ನೆರಡರಿಂದ ಗರಕ್ಕೆಂದು ಒಂದು ಶಬ್ದ ಮಾಡುತ್ತ IVಕ್ಕೆ ಹಾರುವುದುಂಟು ಅಲ್ಲಿ, ತನಗೆ ಮನಸ್ಸಿದ್ದಷ್ಟು ಕಾಲ ತಂಗುತ್ತ, ಆಕಸ್ಮಿಕವಾಗಿ VIIIರ ಮತ್ತು IXರ ನಡುವಿನ ಎಣ್ಣೆಯ ಗುರುತಿಗೆ ಹಾರುವುದು. ಅನೇಕ ತಾಸುಗಳ ವರೆಗೆ ಅಲ್ಲೇ ಇದ್ದು ಮೈಮರೆವು ದುಂಟು. ಅನಂತರ ಹನ್ನೆರಡಕ್ಕೆ ಹಾರಿ ಅಲ್ಲಿ ವಿರಾಮ ಹೊಂದಿ, ಪುನಃ IVಕ್ಕೆ ನೆಗೆವುದಕ್ಕೆ ಸಿದ್ಧತೆ ಮಾಡುವುದು

ಘಂಟೆಯ ಕೈಯೂ ಸ್ವಲ್ಪ ನಿಧಾನವಾಗಿ ನಡೆವುದು. ಒಮ್ಮೊಮ್ಮೆ ಹನ್ನೆರಡರಿಂದ ರರರ್ ಎನ್ನುತ್ತ ಒಂದು ದೊಡ್ಡ ಸುತ್ತು ತಿರುಗಿ, ಕಣ್ಣುರೆಪ್ಪೆ ಮುಚ್ಚಿ ತೆಗೆವಷ್ಟರೊಳಗೆ ಪ್ರದಕ್ಷಿಣೆಯನ್ನು ಮುಗಿಸಿ, ಢಣಢಣೆಂದು ಮೂವತ್ತು ಅಥವಾ ಮೂವತ್ತೆರಡು ಘಂಟೆ ಹೊಡೆಯುವುದು ಹೊರಗೆ ಇಣಿಕಿದರೆ ಜಳಜಳಿನ್ನುವ ಬಿಸಿಲು; ಅಥವಾ ಒಮ್ಮೊಮ್ಮೆ ಕಪ್ಪುಕಪ್ಪಾದ ಕತ್ತಲೆ ಎಷ್ಟೋ ಸಾರಿ ಆ ಮುಳ್ಳುಗಳು ಹಾರುವ ಸಂಭ್ರಮದಲ್ಲಿ ನಾನು ಓದುತ್ತಿದ್ದ ಪೇಪರನ್ನು ಬಿಸಾಡಿ, ಕುರ್ಚಿಯಿಂದ ಹಾರಿದ್ದುಂಟು ಆ ಮೇಲೆ ಮಾವನ ಉಡುಗೊರೆಯೆಂದು ತಿಳಿದು ಸಮಾಧಾನಪಟ್ಟದ್ದುಂಟು.

ಒಂದು ದಿನ ಮೀರೆಯನ್ನು ಕರೆದು ಹೇಳಿದೆ.—"ಮೀರಾ, ನಿನಗೆ ಸರಳವಾದ ಮೂರು ಪ್ರಶ್ನೆಗಳನ್ನು ಕೇಳಬೇಕೆಂದಿದ್ದೇನೆ. ನನಗೆ ನೀನು ಸರಳವಾದ ಮೂರು ಉತ್ತರಗಳನ್ನು ಕೊಟ್ಟರೆ ಮೂರು ಬಗೆಯ ಮಹಾ ರೋಗಗಳಿಗೆ ಚಿಕಿತ್ಸೆಮಾಡಿದ ಯಶಸ್ಸಿದೆ!"

"ಕೇಳಿರಿ" ಎಂದಳು

"ಸರಿ. ಈ ಗಡಿಯಾರದ ಮೇಲೆ ಮೂರು ಎಣ್ಣೆಯ ಕಲೆಗಳಿವೆ. ಅವುಗಳೇನು?"

"ರಿಪೇರಿಗಾಗಿ ಒಮ್ಮೆ ತೆಗೆದಿಟ್ಟಿದ್ದರು. ಅದರ ಡಾಯಲಿನ ಮೇಲೆ ಅಮ್ಮನು ಏನೋ ತಿಂಡಿಯಿಟ್ಟು, ನೆರೆಕರೆಯ ಮಕ್ಕಳಿಗೆ ಕೊಟ್ಟಳಂತೆ"

"ಆ ಮುಳ್ಳುಗಳು, ಒಂದೊಂದೇ ಕಲೆಯ ಮೇಲೆ ಕುಳಿತು, ಆ ತಿಂಡಿಯ ಮೋಹದಿಂದ ಪರಿಮಳವನ್ನಾಘ್ರಾಣಿಸುತ್ತ ಬಡಕ್ಕನೆ ಹಾರುವಾಗ ನನ್ನ ನರಗಳೆಲ್ಲ ಎಳೆದುಬಿಟ್ಟಂತಾಗುತ್ತದೆ ಆ ಶಬ್ದವನ್ನು ನಿಲ್ಲಿಸಲು ದಾರಿಯಿದೆಯೋ?"

"ಗಟ್ಟಿಮುಟ್ಟಾದ ರಚನೆಯ ಒಂದು ಗುಣ, ನಮ್ಮ ಶ್ರೋತ್ರೇಂದ್ರಿಯವನ್ನೂ ಹೃದಯವನ್ನೂ ಪಳಗಿಸುವುದೊಂದೇ ದಾರಿ!"

"ಆ ಘಂಟೆಯ ಮುಳ್ಳು, ಯಾವ ಕಾಲದಲ್ಲೂ, ಎಳ್ಳಷ್ಟು ಸೂಚನೆ ಕೊಡದೆ ಒಂದೇ ಸುತ್ತು ತಿರುಗಿ, ತನಗೆ ಮನ ಬಂದಷ್ಟು ಘಂಟೆಗಳನ್ನು ಹೊಡೆಯುತ್ತದಲ್ಲ—ನಾವು ಸಮಯವನ್ನು ಹೇಗೆ ನಿಶ್ಚೈಸಿಕೊಳ್ಳಬೇಕು?"

"ನನ್ನೊಡನೆ ಕೇಳಿದರೆ ಹೇಳುವೆನು!"

ನನಗೆ ಕುತೂಹಲ ಕಂಡಿತು. ಕೇಳಿದೆ: "ಈಗ ಎಷ್ಟು ಘಂಟೆ ಯಾಯಿತು?"

ಮೀರೆ, ತಟಕ್ಕನೆದ್ದಳು. "ಲಕ್ಷ್ಮಿ"ಯ ಬಳಿಗೆ ಹೋದಳು. ಲಕ್ಷ್ಮಿಯ ಮುಖವನ್ನು ಚೆನ್ನಾಗಿ ನೋಡಿದಳು. ಕೂಡಲೇ ಹೇಳಿದಳು:—"ಎರಡು ಘಂಟೆ, ಐದು ನಿಮಿಷ!"

ನಾನು, ಕಿಸೆಯಿಂದ ನನ್ನ ವಾಚನ್ನು ತೆಗೆದು ನೋಡಿದೆ. ಏನು ಅದ್ಭುತ,—ಮೀರೆ ಎಂದಂತೆ ನಿಜವಾಗಿ ೨-೫ ಆಗಿತ್ತು!

"ಮೀರಾ, ಪ್ರಪಂಚದ ಕೆಲವೇ ಆದರ್ಶ ಹೆಂಡಿರಲ್ಲಿ ನೀನು ರತ್ನ. ಬುದ್ಧಿಮತಿಗಳಿಗೆ ನೀನು ಚಕ್ರವರ್ತಿನಿ; ಗಣಿತಜ್ಞರಲ್ಲಿ ಬ್ರಹಸ್ಪತಿ!" ಎಂದು ಅವಳನ್ನು ಹೊಗಳಿ, ಬಹುಮಾನದ ರೂಪದಲ್ಲಿ ಪ್ರತಿಯಾಗಿ ಏನಾದರೂ ಬರುವುದೋ ನೋಡಿದೆ

ಮೀರೆಯ ಮುಖದ ಮೇಲೆ ನನ್ನ ಸ್ತೋತ್ರದಿಂದ ಯಾವ ಪರಿಣಾಮವೂ ಆಗಲಿಲ್ಲ "ಅದರಲ್ಲೇನೂ ಆಶ್ಚರ್ಯವಿಲ್ಲ ಆ ಘಂಟೆಯ ಮತ್ತು ನಿಮಿಷದ ಕೈಗಳು ಎಲ್ಲಿರುವುವೋ ನೋಡಿ, ಆಯಾ ಅಂಕೆಯಿಂದ ಕೆಲವನ್ನು ಕಳೆಯಬೇಕು! ಉದಾಹರಣಾರ್ಥ —ಈಗ "ಲಕ್ಷ್ಮಿ"ಯ ಮುಖದಲ್ಲಿ ನಿಮಿಷದ ಕೈಯು ಇಪ್ಪತ್ತರಲ್ಲಿದೆ, ಅದರಿಂದ ಹದಿನೈದನ್ನು ಕಳೆಯಿರಿ. ಘಂಟೆಯ ಕೈಯು ಹನ್ನೆರಡರಲ್ಲಿದೆ; ಅದಕ್ಕೆರಡನ್ನು ಕೂಡಿಸಿರಿ! ನಿಮಿಷದ ಕೈಯು VIII ಮತ್ತು IXರ ನಡುವೆ ಇದ್ದಾಗ ಮಾತ್ರ ಆ ಹದಿನೈದು ಮತ್ತು ಎರಡರ ಲೆಕ್ಕವು ಪ್ರಯೋಜನಕ್ಕೆ ಬಾರದು; ಎರಡನೆ ಕಲೆಗೆ—ಅದು ಬಟಾಟೆ ಅಂಬೋಡೆಯ ಗುರುತು—ಬೇರೆ ಲೆಕ್ಕವಿದೆ. ಮೂರನೆಯದು ಉಪ್ಪಿಟ್ಟಿನ ಗುರುತು; ಅದರ ಗಣಿತ ಬೇರೆ. ಮೊದಲನೆಯದು ಮಹಾಲ್ಪುರಿಯ ಚಿಹ್ನೆ! ಇದರ ಎಣಿಕೆ ಬೇರೆ!" ಎಂದಳು.

ತಲೆ ಗಿರ್ರೆಂದಿತು ಕುರ್ಚಿಯಲ್ಲೆ ಇದ್ದ ಕಾರಣ, ಎಲ್ಲೂ ಬೀಳದೆ, ಬಿದ್ದಲ್ಲಿಯೆ ಕಣ್ಣು ಮುಚ್ಚಿಕೊಂಡು ನಾಲ್ಕನೆ ತರಗತಿಯಲ್ಲಿ ಸುಬ್ರಾಯ ಮೇಸ್ತ್ರು "ಸಿಂಪ್ಲಿಫಿಕೇಶನ್" ಕಲಿಸುವಾಗಲೂ ಮೊನ್ನೆ ಆಗ್ರಾ ಇನ್ಶೂರೆನ್ಸ್ ಕಂಪೆನಿಯ ಏಜಂಟನು ಇಡೀ ಜೀವಮಾನ, ಕಾಲು ಜೀವಮಾನ, ಬರೇ ಹೆಂಡತಿ ಬದುಕಿರುವ ಮಾನ ಮತ್ತು ಮೂರು ತಲಾಂತರಗಳ

ಮಾನ—ಇವಿಷ್ಟು ಕೋಷ್ಟಕಗಳನ್ನು ಒಂದೇ ಬಾರಿ ವಿವರಿಸುವಾಗಲೂ ಹೀಗೇ ಆಗಿತ್ತು ಆತನು ನನ್ನ ಸ್ಥಿತಿಯನ್ನು ನೋಡಿ, ಸತ್ತವರಿಗೆ ವಿಮೆ ಇಳಿಸಿ ಪ್ರಯೋಜನವಿಲ್ಲವೆಂದು ನೆನಸಿ, ವಿಮೆ ಇಳಿಸುವ ಮೊದಲೇ ನಾನು ಮರಣಪಟ್ಟದ್ದಕ್ಕೆ ದುಃಖಿಸಿ, ಹೊರಟುಹೋಗಿದ್ದನು.

ಮುಕ್ಕಾಲು ತಾಸಿನನಂತರ ಕಣ್ತೆರೆದೆ. ಆಗಲೂ ಮೀರೆ, ನನ್ನ ಸ್ಥಿತಿಯನ್ನರಿಯದೆ, ಭಾಷಣವನ್ನು ಮುಂದುವರಿಸಿದ್ದಳು "ಮೀರಾ!" ಎಂದೆ.

"ತಮಗೆ ತಿಳಿಯಿತಷ್ಟೆ?" ಎಂದಳು.

"ತಿಳಿಯಿತು ಮಹಾಲ್ಸ್ವರಿ, ಬಟಾಟೆ ಮತ್ತು ಉಪ್ಪಿಟ್ಟು ಹೀಗೆ೩ 'ಮೆಥಡು'ಗಳನ್ನು ನಾನು ನೆನಪಿಟ್ಟುಕೊಂಡರಾಯಿತು, ಅಲ್ಲವೇ?" ಎಂದೆ.

"ಸರಿ!" ಎಂದು ಅನುಮೋದನಾಸೂಚಕ ಸ್ವರದಿಂದ ನುಡಿದು, ಮುಖವನ್ನು ಸುಬ್ಬಪ್ಪ ಮೇಸ್ತ್ರ ಹಾಗೆಯೇ ಹಿಡಿದು ಶ್ವಾಸಬಿಟ್ಟಳು.

ಪುನಃ "ಮೀರಾ!" ಎಂದೆ

"ಏನು?"

"ಆ ವಾಚ್ ರಿಪೇರರ್—ಹುಲಿಮೀಸೆಯುವ—ವೊನ್ನೆ ಬಂದು ಅಂಗಲಾಚಿ ಬೇಡಲಿಲ್ಲವೇ? ಅವನನ್ನು ಕರೆದು "ಲಕ್ಷ್ಮಿ"ಯನ್ನು ಅವನಿಗೊಪ್ಪಿಸಿ, ಐದು ರೂಪ್ಯಾಗಳನ್ನು ಅದರ ಜತೆಯಲ್ಲಿ ಕೊಟ್ಟು—"ನೀನು ಮಮತೆಯಿಂದ ಇದನ್ನು ಸಾಕಿಕೊಂಡಿರು" ಎಂದು ಬುದ್ಧಿವಾದ ಹೇಳಿದರೇನಾಗುವುದು?"

ಮೀರೆಯ ಮುಖದ ಮೇಲೆ ಸಮರಮೇಘಗಳು ಸಂಚರಿಸಲಾರಂಭಿಸಿದುವು. ತಿಳಿದೂ ತಿಳಿದು ನಾನೇಕೆ ಈ ಯುದ್ಧಕ್ಕೆ ದಾರಿಮಾಡಿಕೊಂಡೆನೆಂದು ಚಿಂತಿಸಿ, ಫಕ್ಕನೆ, "ಮೀರಾ, ತಪ್ಪಿದೆ! ಐದು ರೂಪಾಯಿಗಳನ್ನು ಕೊಟ್ಟು ರಿಪೇರಿ ಮಾಡಿಸೋಣ!" ಎಂದೆ

ಸಮರಮೇಘಗಳು ದೂರವಾಗಲಿಲ್ಲ. ಮೀರೆ ಫಟಕ್ಕನೆ ಆರಾಮ ಕುರ್ಚಿಯಿಂದೆದ್ದು ಕುಳಿತು, "ವಾಚ್‌ರಿಪೇರರನ್ನು ನೀವು ಈ ಮನೆಗೆ ತಂದರೆ, ಆತನ ಮೀಸೆಯನ್ನು ಕಿತ್ತು, ಕಣ್ಣನ್ನು ಕೀಳಿ, ಎದೆಯನ್ನು ಸೀಳಿ, ರಿಪೇರಿ ಸಾಮಾನು ಸಮೇತ ......."

ಮುಂದಿನ ಮಾತನ್ನು ನಾನು ಕೇಳಲಿಲ್ಲ. ಮೀರೆ, ಆ ಪಾಪದ ರಿಪೇರರನ ಹತ್ಯಮಾಡಿ, ಶವವನ್ನು ರಸ್ತೆಗೆ ಒಗೆವಳೆಂದು ಅರ್ಥವಾಯಿತು!

ಐದು ರೂಪಾಯಿ ಆಸೆಯಿಂದ ಜೀವವನ್ನೇ ಕಳಕೊಳ್ಳುವಂತಹ ಗಂಡಾಂತರದ ಸ್ಥಳಕ್ಕೆ ಆತನನ್ನು ಕರೆವುದರಿಂದ ಯಾರಿಗೂ ಕ್ಷೇಮವಿಲ್ಲವೆಂದು ತಿಳಿದು,—"ಬೇಡವಾದರೆ, ನನ್ನ ಆಕ್ಷೇಪವಿಲ್ಲ ಮಾರಾ, ನನಗೊಂದಿಷ್ಟು ಹತ್ತಿಯನ್ನು ಕೊಟ್ಟರೆ, ಕಿವಿಗಳಿಗೆ ತುರುಕಿ, ಕಿವಿಗಳೂ ಹೃದಯವೂ ಯೋಗಾಭ್ಯಾಸದಿಂದ ಬಲಪಡುವ ತನಕ ಜೀವನಮಾಡಿಕೊಂಡಿರುತ್ತೇನೆ!" ಎಂದೆ.

ತನ್ನಪ್ಪನ "ಲಕ್ಷ್ಮಿ"ಗೆ ಈ ಬಗೆಯ ಅಪಮಾನವಾಗುತ್ತಿರುವುದನ್ನು ನೋಡಿ ಮಾರೆ ಸಿಡಿದೇಳುತಿದ್ದಳು ಅಷ್ಟರಲ್ಲೆ "ಲಕ್ಷ್ಮಿ"ಯ ಘಂಟೆಯ ಮುಳ್ಳು ಪ್ರಕೋಪಗೊಂಡು ಗಿರ್ರೆಂದು ತಿರುಗಿ ಹನ್ನೆರಡಕ್ಕೆ ಹೋಗಿ ನಿಂತು, .... ಲೆಕ್ಕಮಾಡಿದೆ.. ....ನಾಲ್ವತ್ತೈದು ಘಂಟೆಗಳನ್ನು ಹೊಡೆದು ಸುಮ್ಮಗಾಯಿತು ಕುರ್ಚಿಯಿಂದ ನಾನು ಒಮ್ಮೆಗೆ ಹಾರಿದುದನ್ನು ಕಂಡು ಮಾರೆ, ತನ್ನ ಕೋಪವನ್ನು ತಡೆದು ಕೋಣೆಯ ಮತ್ತೊಂದು ಮೂಲೆಗೆ ನೋಡಿದಳು. ಅಲ್ಲಿ ನಾನು ತಂದಿಟ್ಟ ಒಂದೂಕಾಲು ರೂಪಾಯಿಯ ಟೈಂಪೀಸು ಇತ್ತು "ನಿಮಗೆ ಬೇಕಾದರೆ ಆ ನಿಮ್ಮ "ಬಿ" ಗಡಿಯಾರವನ್ನು ನೋಡಿ ತೃಪ್ತಿ ಪಡೆಯಿರಿ!" ಎಂದಳು. "ಬಿ" ಟೈಂಪೀಸಿಗೆ ಕೋಪ ಬರಲಿಲ್ಲ; ನನಗೂ ಬರಲಿಲ್ಲ. ನಾನು "ಆಗಬಹುದು!" ಎಂದೆ. "ಬಿ" ರಾಣಿಯು "ಕಟ್ಕ ಕಟ್ಕ" ಎಂದು ಮುಂದರಿದಳು

ಮೂರುವರೆ ಘಂಟೆ ಹೊತ್ತಿಗೆ ಮಾರೆ, ವಿಶ್ರಾಂತಿಗೆಂದು ತೆರಳಿದಳು. ನಾನು ಮೆಲ್ಲನೆ ಎದ್ದು ಹುಲಿಮೀಸೆ ಅಚ್ಚಣ್ಣು ("ಅಚ್ಚಣ್ಣು" ಎಂದು ವಾಚ್‌ರಿಪೇರರನ ಹೆಸರು!)ವನ್ನು ಕರೆಯಹೋದೆ ಮಾರೆಗೆ ತಿಳಿಯದಂತೆ "ಲಕ್ಷ್ಮಿ"ಯನ್ನು ಸುಶಿಕ್ಷಿತ ನಾಗರೀಕಳನ್ನಾಗಿ ಮಾಡಿ, ಯೋಗ್ಯ ಪ್ರಜೆಯಾಗಿ ಬಾಳುವಂತೆ ಮಾಡಬೇಕೆಂದು ನನ್ನ ಕಾಂಕ್ಷೆ.

"ಅಚ್ಚಣ್ಣು" ಬಂದನು. ಸಾವಿರಾರು ಮಹಾ ಮಹಾ ಗಡಿಯಾರಗಳನ್ನು ಯಶಸ್ವಿಯಾಗಿ ರಿಪೇರಿಮಾಡಿದ ಪರಾಕ್ರಮವನ್ನು ನೋಡಿ, ಸಾರ್ವಜನಿಕ ಸೇವೆಯ ಗುರುತಾಗಿ ಊರಿನ ಜನರೇ ಆ ಮೀಸೆಗಳನ್ನು ಆತನಿಗೆ ಬಹುಮಾನವಾಗಿ ಕೊಟ್ಟಿದ್ದರೋ ಎಂಬಂತೆ ಅವುಗಳನ್ನಾತನು ಗೌರವದಿಂದ ತುಟಿಗಳ ಮೇಲೆ ಹೊತ್ತುಕೊಂಡು ಬಂದನು. ಆ ಮೀಸೆ

ಗಳನ್ನು ನೋಡುವಾಗಿ "ಲಕ್ಷ್ಮಿ"ಯನ್ನು ಪಳಗಿಸಲು ಯೋಗ್ಯ ವ್ಯಕ್ತಿ ಯೊಂದು ದೊರೆಯಿತೆಂಬ ಭರವಸೆ ನನ್ನಲ್ಲಿ ಹುಟ್ಟಿತು

"ಅಚ್ಚಣ್ಣಾ, ಲಕ್ಷ್ಮಿಯು ನಿನಗಾಗಿ ಕಾಯುತ್ತಿರುವಳು ಆಕೆ ಯೊಡನೆ ಮಾತಾಡಿ, ಶಸ್ತ್ರಕ್ರಿಯೆ ನಡೆಸಿ ಆಕೆಯನ್ನು ಬದುಕಿಸಿಕೊಡುವ ಭಾರ ನಿನ್ನ ಮೇಲಿದೆ" ಎಂದೆ.

ಅಚ್ಚಣ್ಣ "ಲಕ್ಷ್ಮಿ"ಯ ಕಡೆಗೆ ನೋಡಿದ ತಾನು ಜಿಲ್ಲಾ ಕಲೆಕ್ಟರ ರಿಂದ ಹಿಡಿದು ಭೋಪಾಲದ ನವಾಬರ ವರೆಗೆ ನಾನಾ ಮಹಾಪುರುಷರ ವಾಚುಗಳನ್ನೂ ಕ್ಲಾಕ್‌ಗಳನ್ನೂ ರಿಪೇರಿಮಾಡಿದ ಕತೆಯನ್ನು ಹೇಳ ಲಾರಂಭಿಸಿದ ಆತನ ವರದಿಯಂತೆ, ಲಂಡನಿನ ಪಾರ್ಲಿಮೆಂಟ್ ಗೃಹದ ಮೇಲಿನ "ಬಿಗ್ ಬೆನ್" ಹೊರತಾಗಿ ಮಿಕ್ಕ ಗಡಿಯಾರಗಳೆಲ್ಲ ಆತನ ಕೈಯಲ್ಲೆ ಆರೈಕೆಹೊಂದಿ ಚಲಿಸುತ್ತಿವೆಯೆಂದು ಅರ್ಥಮಾಡಿಕೊಂಡೆ

"ಲಕ್ಷ್ಮಿ" ಕರಕ್ ಎಂದಳು ಅಚ್ಚಣ್ಣ ಮೂರಡಿ ಹಿಂದಕ್ಕೆ ಹಾರಿದ. ನಾನೂ ಅವನೊಂದಿಗೆ ಹಾರುತ್ತ,—"ಗಾಬರಿ ಇಲ್ಲ ಅದು "ಲಕ್ಷ್ಮಿ"ಯ ಒಂದು ವೈಶಿಷ್ಟ್ಯ. ಆಗಾಗ್ಗೆ ಕಫ ಬಂದು ಗಂಟಲಲ್ಲಿ ಸಿಲುಕಿಕೊಂಡಂತೆ ಮಾಡುವುದುಂಟು. ಅದನ್ನೀಗ ನೀನು ಸರಿಪಡಿಸಬೇಕು" ಎಂದೆ

ಅಚ್ಚಣ್ಣನಿಗೆ "ಲಕ್ಷ್ಮಿ"ಯನ್ನು ಮುಟ್ಟಲು ಅಂಜಿಕೆಯಾಯಿತು. ಆದರೂ, ಭೋಪಾಲ ಮಹಾರಾಜರ ಗಡಿಯಾರವನ್ನು ಸರಿಮಾಡಿದ ಸುದ್ದಿಯನ್ನು ನನಗೆ ಹೇಳಿದುದನ್ನು ನೆನಪುಮಾಡಿಕೊಟ್ಟೆ. ತನ್ನನ್ನು ಯಾವುದೋ ವಿಜಾತೀಯ ಯಂತ್ರದಿಂದ ಕೊಲ್ಲಲು ಹೀಗೆ ಬಲೆಗೆ ತಂದು ಹಾಕಿರುವರೆಂಬಂತೆ ನನ್ನನ್ನು ಸಂಶಯದಿಂದ ನೋಡುತ್ತ, ಕೊನೆಗೆ ತುಟಿ ಗಳನ್ನು ಕಚ್ಚಿ, ತನ್ನ ಶಸ್ತ್ರಾಸ್ತ್ರಗಳ ಪೆಟ್ಟಿಗೆಯನ್ನು ನೆಲದಲ್ಲಿರಿಸಿ, "ಲಕ್ಷ್ಮಿ" ಯನ್ನು ಪರಾಕ್ರಮದಿಂದ ನೆಲಕ್ಕಿಳಿಸಿ ಒಮ್ಮೆ 'ಚಾವಿ' ಕೊಟ್ಟನು.

ಹಿರಿರಿರಿರಿ ಎಂದು ಎರಡೂ ಮುಳ್ಳುಗಳು ತಿರುಗಲಾರಂಭಿಸಿದವು. ಕ್ರೈಸ್ತ ಶ್ರೀಮಂತನೊಬ್ಬನು ಕಾಲವಾದಾಗ ಇಗರ್ಜಿಯಲ್ಲಾಗುವಂತೆ ಢಣ ಢಣ ಘಂಟೆಗಳಾಗಲಾರಂಭವಾದುವು ನನ್ನ ತಲೆ ತಿರುಗಿತು. "ಅಚ್ಚಣ್ಣಾ, ಆ ಶಬ್ದವನ್ನು ನಿಲ್ಲಿಸಿ, ಒಮ್ಮೆಗೆ ಆ ರಿಪೇರಿಯನ್ನು ಮುಗಿಸಿ ಬಿಡಪ್ಪ!" ಎಂದು ಮೊರೆಯಿಟ್ಟೆ. ಮಾರಿಗೆ ಎಚ್ಚರವಾದರೆ, ತನ್ನಪ್ಪನ

"ಲಕ್ಷ್ಮಿ"ಯ ಮೇಲೆ ಅತ್ಯಾಚಾರವಾಗುವುದನ್ನು ಕಂಡು, ಅಚ್ಚಣ್ಣನನ್ನು ಕೊಂದು ರಸ್ತೆಗೆ ಬಿಸುಡುವಳೇ ಎಂಬ ಭಯ.

ಅಚ್ಚಣ್ಣ "ಲಕ್ಷ್ಮಿ"ಯ ಮುಖದ ಮೇಲೆ ತನ್ನೆರಡೂ ಕೈಗಳನ್ನಿಟ್ಟು, ಬಲದಿಂದ ಒತ್ತಿದನು ಗರಗರಾಟ ನಿಂತಿತು ಘಂಟೆಗಳೂ ನಿಂತವು.

"ಲಕ್ಷ್ಮಿ ಸತ್ತಳೇ?" ಎಂದು ಗಾಬರಿಯಿಂದ ಕೇಳಿದೆ.

"ಇಲ್ಲ, ಬೋಧ ತಪ್ಪಿದೆ. ಇನ್ನೈದು ನಿಮಿಷಗಳಲ್ಲಿ ಪುನಃ ಹುಷಾರ್!'' ಎಂದನು.

ಐವತ್ತು ನಿಮಿಷಗಳು ಕಳೆದುವು ಅಚ್ಚಣ್ಣ "ಲಕ್ಷ್ಮಿ''ಯನ್ನು ಸೀಳಿ, ಎಲ್ಲ ಅವಯವಗಳನ್ನು ಹೊರಗೆ ತೆಗೆದಿದ್ದನು

"ರಾಯರೇ, ಲಕ್ಷ್ಮಿಯ ಪ್ರಕೃತಿಯು ಕೆಟ್ಟುಹೋಗಿದೆ ಪಥ್ಯ ಚೆನ್ನಾಗಿರಲಿಲ್ಲ!'' ಎಂದನು

"ಏನಾಗಿದೆ?" ಎಂದೆ

"ಲಕ್ಷ್ಮಿಯಲ್ಲಿ ನಾನು ಹರಳೆಣ್ಣೆ, ತೆಂಗಿನೆಣ್ಣೆ, ಎಳ್ಳೆಣ್ಣೆ, ಕೇಶರಂಜನ, ಭೃಂಗಾಮಲಕ, ಲಾಕ್ಷಾದಿ ಮೊದಲಾದ ಹಲವು ಬಗೆಯ ತೈಲಗಳು ಬಿದ್ದುದನ್ನು ನೋಡಿದೆ ಹೇಗೆ ಬದುಕಬಹುದು?'' ಎಂದನು.

"ಇಂಟಸ್ಟಾಯ್ನಲ್ ಟುಬರ್ಕ್ಯುಲೊಸಿಸ್ (ಕರುಳಿಗೆ ಕ್ಷಯ ಹಿಡಿಯುವುದೆನ್ನುತ್ತಾರೆ) ಹಿಡಿದಂತಾಗಿದೆ ಅಲ್ಲವೇ? ಸರಿಮಾಡಪ್ಪ!" ಎಂದೆ.

ಹೇಗೂ ಐದು ಘಂಟೆಗೆ ರಿಪೇರಿ ಮುಗಿಯಿತು "ಲಕ್ಷ್ಮಿ"ಯು ಗೋಡೆಗೇರಿದಳು ಅಚ್ಚಣ್ಣ ಮೂರು ರೂಪಾಯಿಗಳನ್ನು ಕಿಸೆಗೆ ತುರುಕಿ, ಪ್ರಪಂಚದ ಅಸಾಧ್ಯ ಗಡಿಯಾರವನ್ನು ರಿಪೇರಿಮಾಡಿದ ದಾಖಲೆಯ ಸಂತೋಷದಿಂದ ನಡೆದನು.

"ಲಕ್ಷ್ಮಿ"ಯನ್ನು ಈಗ ಸ್ಪರ್ಧಾವೃಷ್ಟಿಯಿಂದ ನೋಡಿದೆ "ಲಕ್ಷ್ಮೀ, ನಿನ್ನ ಸೊಕ್ಕು ಮುರಿದೆ, ತಿಳಿಯಿತೇ? ಇನ್ನು ... " ಎನ್ನುವಷ್ಟರಲ್ಲಿ... .

"ರರರರರರ್sss" ಎಂದು ಶಬ್ದವಾಯಿತು ನನ್ನನ್ನೇ ನೋಡುತಿದ್ದ ಲಕ್ಷ್ಮಿಯು ನನ್ನ ಮೇಲೆ ಮುನಿದುಬಿದ್ದಂತೆ,—ಘಂಟೆ ಮತ್ತು ನಿಮಿಷದ ಕೈಗಳೆರಡೂ ಗರಗರನೆ ತಿರುಗಲಾರಂಭಿಸಿದವು ಢಣಣಣಣ ಣೆಂದು ಬೆಂಕಿಯಾರಿಸುವ ಯಂತ್ರವು ಓಡಿಬರುತಿದ್ದಂತೆ ಶಬ್ದಮಾಡುತ್ತ

ಘಂಟೆಗಳು ಬಾರಿಸತೊಡಗಿದುವು. ನಾಗಾಲೋಟದಿಂದ ಬಾಗಿಲ ವರೆಗೆ ಹೋಗಿ, ಅಚ್ಚಣ್ಣುವನ್ನು ಕರೆಯೋಣವೆಂದು ನೋಡಿದೆ. ಅಚ್ಚಣ್ಣು ಕಾಣ ಲಿಲ್ಲ ಪುನಃ ಒಳಗೆ ಓಡಿ ಬಂದೆ ಹಾಯ್, ಏನು ದೃಶ್ಯವದು!

ಮಾರಿ, ಕಣ್ಣುಗಳನ್ನು ಕೆಂಪಗೆ ಮಾಡಿ, ಸಿಂಹಿಣಿಯಂತೆ ನೋಡು ತಿದ್ದಳು. "ಲಕ್ಷ್ಮಿ"ಯು ಕೂಗುತ್ತಲೇ ಇದ್ದಳು!

"ಮಾರಾ" ಎಂದು ಬಾಯ್ತೆಗೆದೆ

"ಮಾತಾಡಬೇಡಿರಿ. ನನಗೆ ತಿಳಿದಿದೆ. ರಿಪೇರಿಮಾಡಿದವರಾರು?" ಎಂದಳು

ಹುಸಿನಗು ನಗುತ್ತ, "ಅಂದರೆ ...ಮಾರಾ.. .. " ಎಂದೆ.

"ರಿಪೇರಿಮಾಡಿದ ರಾಕ್ಷಸನಾರು?"

"ಕೋಪಮಾಡಬೇಡ, ಮಾರಾ! ಕ್ಷೇಮವಾಗಬೇಕೆಂದೇ.. ....."

"ಕೀ" ಎಂದು ಅರಚಿದಳು ಮಾರಿ ಮೇಜಿನ ಮೇಲಿದ್ದ ನಾಲ್ಕು ಪತ್ರಿಕೆಗಳನ್ನು ತೆಗೆದು ಭರ್‍ರನೆ ಹರಿದು ನೆಲಕ್ಕೆ ಬಿಸುಡಿದಳು. ಒಂದು ಪಟವನ್ನು ತೆಗೆದು ಮೇಜಿಗೆ ಬಡೆದು, ನಾಲ್ಕು ವರ್ಷಗಳ ಹಿಂದಣ ಒಂದು ಕೆಲೆಂಡರನ್ನು ಕಿಟಕಿಯಿಂದ ಹೊರಗೆ ಅಂಗಳಕ್ಕೆ ಬಿಸುಡಿ, ಗೋಡೆಯ ಆಣಿಗಿದ್ದ ನನ್ನ ಕೋಟನ್ನು ತೆಗೆದು ನನ್ನ ಮೇಲೆ ಒಗೆದು, ಕೋಣೆಯ ಮೂಲೆಗೆ ಓಡಿಹೋಗಿ, "ನಿಮ್ಮ 'ಬಿ' ರಾಣಿಯನ್ನು ನಾನು ರಿಪೇರಿ ಮಾಡುತ್ತೇನೆ!" ಎನ್ನುತ್ತ 'ಬಿ' ಗಡಿಯಾರವನ್ನೆತ್ತಿದಳು

'ಪರಮಾತ್ಮಾ!' ಎನ್ನುತ್ತ ಓಡಿಹೋಗಿ 'ಬಿ'ಯನ್ನು ಅವಳ ಕೈಯಿಂದ ಕಿತ್ತು ತೆಗೆದು, "ಇಲ್ಲ ಮಾರಾ! ವಿವೇಕಗೆಡಬೇಡ! "ಲಕ್ಷ್ಮಿ" ಹೋದರೆ ಇನ್ನೊಬ್ಬ ಸರಸ್ವತಿಯನ್ನು ನಾನು ತರುವೆ 'ಬಿ' ಮೇಲೇಕೆ ಕೋಪ" ಎಂದು ಆಕೆಯ ಬೆನ್ನ ಮೇಲೆ ಕೈಯಾಡಿಸಿದೆ ದಣುವಿನಿಂದ ಮಾರಿಯು ಕಣ್ಣು ಮುಚ್ಚಿದಳು ನಾನು ಆಕೆಯನ್ನು ಒಂದು ಕುರ್ಚಿಯಲ್ಲಿ ಕುಳ್ಳಿರಿಸಿದೆ.

ಮಾರಿ ನೊಂದು, ನಿಟ್ಟುಸಿರಿಡುತ್ತಿದ್ದಳು ನಾನು ಆಕೆಯನ್ನು ಬಲು ಸವಿಯಾದ ಮಾತುಗಳ ಶಾಂತ ಅಂಜನದಿಂದ ತಣಿಸಲೆತ್ನಿಸುತಿದ್ದೆ.

"ಆ ವಾಚ್ ರಿಪೇರರನ್ನು ನೀವಾದರೂ ಕೊಲ್ಲಬೇಕು" ಎಂದು ಕೊನೆಗಂದಳು.

"ಆತ ಸಿಕ್ಕಿದರೆ ನಮ್ಮಿಬ್ಬರೊಳಗೆ ಒಬ್ಬನ ಅಂತ್ಯ ಖಂಡಿತ!" ಎಂದೆ.

ಅಷ್ಟರಲ್ಲಿ ನನ್ನ 'ಬಿ' ರಾಣಿಯಿದ್ದಲ್ಲಿ, ಭೂಗರ್ಭವನ್ನು ಭೇದಿಸಿ ದಂತಹ ರೀತಿಯ ಒಂದು ಶಬ್ದವಾಯಿತು ನಾವಿಬ್ಬರೂ ಆ ಕಡೆ ಅವಾ ಕ್ಕಾಗಿ ನೋಡುತಿದ್ದಂತೆ, ರೊಂಯ್ ಎನ್ನುತ್ತ 'ಬಿ' ರಾಣಿಯು ಕೋಣೆಯ ನಡುವಿಗೆ, ತಾನಾಗಿಯೇ ಹಾರಿದಳು! ಅದರೊಳಗಿನ ಅವಯವಗಳೆಲ್ಲ ಗಿರ್ರೆಂದು ಕೋಣೆ ತುಂಬ ಹಾರಿದುವು! ನಾವು ನಿಷ್ಪಂದ!

"ಏನಿದು ಅನಾಹುತ?" ಎನ್ನುತ್ತ ಮೂರು ನಿಮಿಷಗಳನಂತರ ಮೀರೆ ಕೇಳಿದಳು

"ನನಗರಿಯದು ಆ ವಾಚ್ ರಿಪೇರರನ ಕೆಟ್ಟ ದೃಷ್ಟಿಯಾಗಿದ್ದಿರ ಬೇಕು!" ಎಂದೆ

"ಅವನನ್ನು ಎರಡುಬಾರಿ ಕೊಂದರೂ ನನಗೆ ದುಃಖವಿಲ್ಲ!" ಎಂದಳು.

"ಅದನ್ನು ನನ್ನ ಪಾಲಿಗೆ ಬಿಡು!" ಎನ್ನುತ್ತ ಮುಂದಿನ ಕಾರ್ಯ ಕ್ರಮವೇನು ಎಂದು ಆಲೋಚನೆಗೆ ತೊಡಗಿದೆ ನೋಡುತ್ತಿದ್ದಂತೆ ನೆಲದ ಮೇಲೆ ಎರಡುಮೂರು ರಿಪೇರಿ ಉಪಕರಣಗಳು ಕಂಡುಬಂದುವು. ಒಂದು ಆಲೋಚನೆ ಹೊಳೆಯಿತು ಆ ರಿಪೇರರನು ಆ ಉಪಕರಣಗಳನ್ನು ಮರೆತುಹೋಗಿರಬೇಕು; ಅವುಗಳಿಗಾಗಿ ಈಗ ಮರಳಿ ಬಾರದಿರನು.

ಅವನನ್ನು ಹೇಗೆ ಉಪಚರಿಸಬೇಕು ಎಂಬುದೇ ಈಗಣ ಆಲೋಚನೆ; ಆತ ಗಟ್ಟಿ ಆಳು. ಮೊದಲು ಆತನ ಮುಸುಡನ್ನೆ ಒಡೆವೆನು. ಅನಂತರ ಕಣ್ಣನ್ನು . . . . . .ಅಲ್ಲಲ್ಲ, ತಲೆಗೇ ಬಡೆದರೆ, ಮೂರ್ಛೆಹೋಗುವನು. ನಂತರ ಮೀಸೆಗಳನ್ನು ಕಿತ್ತು

"ಬಾಗಿಲೂ!" ಎಂದು ಯಾರೋ ಕರೆದರು. ಎದೆ ನಡುಗಿತು. ವಾಚ್ ರಿಪೇರರನು ಬಂದಿರುವನು! ಈಗ ಈಗ... ... !

"ಬಾಗಿಲೂ!"

"ಮೀರಾ, ಬಂದನು ಆ ಹುಲಿಮೀಸೆ! ನೀನಿಲ್ಲೆ ಇರು. ನಮ್ಮ ಕಾಳಗ ನೋಡಿ ಮೂರ್ಛೆಯಾಗಬಹುದು ನೀನು!" ಎನ್ನುತ್ತ "ಬಂದೆ!" ಎಂದು ಹೇಳಿ ಮೆಲ್ಲನೆ ಹೋಗಿ ಬಾಗಿಲು ತೆರೆದೆ.

ಕತ್ತಲೆಯಾಗುತ್ತ ಬಂದಿತ್ತು ನನ್ನ ವೈರಿಯು ನನ್ನ ಮುಂದೆ

ನಿಂತಿದ್ದನು. ರಸ್ತೆಯಲ್ಲಿ ಜನರ ಸುಳಿವು ಇರಲಿಲ್ಲ. ಎಲ್ಲವೂ ಅನುಕೂಲ! "ಹರಹರ ಮಹಾದೇವ" ಎಂದು ಮರಾಠರ ಸೈನ್ಯವು ವೀರಾವೇಶದಿಂದ ಉದ್ಘೋಷಿಸಿದಂತೆ "ಕತ್ತೆ ಕಿರುಬನೇ, ಇಕೋ" ಎಂದು ಆರ್ಭಟಿಸುತ್ತ, ಆತನ ಮೈಮೇಲೆ ಹಾರಿ, ಮುಖವನ್ನು ಹಿಡಿದು ಪರಚಿ. ......ಕೂಡಲೇ ನನ್ನ ಮುಖವೂ ಪರಚಿದಂತಾಗಲು ... ಮೂರ್ಛೆ ಹೋದೆ!

× × × ×

ನಾನು ಮೂರ್ಛೆಯಿಂದೇಳುವಾಗ, ಮಾರಿ ಬಳಿಯಲ್ಲಿ ಕುಳಿತು ಮೆಲ್ಲನೆ ಅಳುತಿದ್ದಳು. ಮಾರಿಯ ಆಚೆ ಮತ್ತೊಂದು ಹಾಸಿಗೆಯಲ್ಲಿ ಮತ್ತೊಬ್ಬರಾರೋ ಮಲಗಿದ್ದರು ಅವರ ಮುಖಕ್ಕೆಲ್ಲ ಬಟ್ಟೆ ಕಟ್ಟಿತ್ತು.

ಅರ್ಥವಾಗದೆ, "ಮಾರಾ, ಅದು ಯಾರು?" ಎಂದು ಕೇಳಿದೆ

"ನನ್ನ ಅಪ್ಪ!" ಎನ್ನುತ್ತ, ಮುಖಕ್ಕೆ ಕೈಹಿಡಿದು ಧಾರಾಳ ಅತ್ತಳು.

ನನಗರ್ಥವಾಯಿತು ವಾಚ್ ರಿಪೇರರನೆಂದು ಪ್ರಮಾದವಶಾತ್ ನಾನು, ಆಗ ತಾನೆ ಬಂದ ಮಾರಿಯ ಅಪ್ಪನ ಮುಖವನ್ನು ಸೀಳಲು ಯತ್ನಿಸಿದ್ದೆ ಪ್ರಾಣಭಯದಿಂದ ಆತನು ನನ್ನ ಮುಖವನ್ನು ಪರಚಿದ್ದನು!

× × × ×

ಈಗ ನಮ್ಮ ಮನೆಯಲ್ಲಿ "ಲಕ್ಷ್ಮಿ" ಇಲ್ಲ ಮಾರಿ, ತಾನಾಗಿಯೋ ಅದನ್ನು ತನ್ನ ತಂದೆಯ ಮನೆಗೆ "**ಬಡವರ ಮನೆಯಲ್ಲಿ ಲಕ್ಷ್ಮಿ ನಿಲ್ಲುವುದಿಲ್ಲ**" ಎಂಬ ಮಾತಿನೊಡನೆ ಕಳುಹಿರುವಳು

---

# ೨. ಸಾಧಿಸಿ, ನುಂಗದ ಸಬಳ

"ಒಂದು ಇಲಿ ಈಗ ನೋಡಿದೆ—ಅಡಿಗೆ ಕೋಣೆಯಲ್ಲಿ!" ಎಂದು ಗಾಬರಿಯಿಂದ ನುಡಿದಳು ಮಾರಿ.

ನಾನು ನನ್ನ ಕೊರಡಿಯಲ್ಲಿ ಕುಳಿತು ಒಂದು ಮಾವಿನ ಹಣ್ಣನ್ನು ಬಿಡಿಸಲೆತ್ನಿಸುತಿದ್ದೆ ವೆಂಕಟಪ್ಪನವರ ಕಲಾನೈಪುಣ್ಯವನ್ನೆಲ್ಲಿಯೋ ಓದಿ, "ಕರ್ಣಾಟ ಮಾತೆ.... ...ಆದರ್ಶ........ಭಾಗ್ಯೋದಯ..... ." ಈ ಶಬ್ದ

ಗಳು ಹೃದಯದಲ್ಲಿ ಇನ್ನೂ ಕದನವಾಡುತಿದ್ದು, ಉಂಟಾದ ಸ್ಫೂರ್ತಿಯೋ ಭಾವವೋ ಮತ್ತೇನೋ—ಅಂತು ಒಂದು ಮಾವಿನಹಣ್ಣು ನನ್ನ ಲೇಖನಿಯಿಂದ ಕೆಳಗಿಳಿದು ನಿಲ್ಲಲು ಯತ್ನಿಸುತಿತ್ತು ಅಂತಹ ಪರಮ ಪವಿತ್ರ ಕ್ಷಣದಲ್ಲಿ ಬಂತು ಮಿಾರೆಯಿಂದ ಆ ಉದ್ಗಾರ!

"ಇಲಿ? ಅಡಿಗೆಕೋಣೆಯಲ್ಲಿ? ಒಳ್ಳೆಯದು; ಅದಕ್ಕೆ ತಕ್ಕಸ್ಥಳ ಬೇಕಾದಷ್ಟು ತಿನ್ನಲಿದೆ, ಒಳ್ಳೇ ನೀರಿದೆ ಸಾರಾಂಶ—ಇಲಿಯ ಸ್ವರ್ಗ!" ಎಂದೆ

"ತಮಾಷೆ ಮಾಡಬೇಡಿರಿ ಈಗ ನಾವೇನು ಮಾಡೋಣ?"

"ಮಾಡುವುದೇನು? ನಾನೇನೂ ಈಗ ಮಾಡುವಂತಿಲ್ಲ ನನಗೆ ಕೆಲಸವಿದೆಯೆಂದು ಅದಕ್ಕೆ ಹೇಳು ಮತ್ತೊಮ್ಮೆ ಸಿಗುವೆನೆಂದೂ ಹೇಳು" ಎನ್ನುತ್ತ ಮಾವಿನಹಣ್ಣನ್ನು ದಂಟಿನ ಬಳಿ ತಿದ್ದ ಹೋದೆ

"ಕೆಲಸವೇನು? ಗೇರುಹಣ್ಣು ಬಿಡಿಸುವುದೇ?"

"ಗೇರುಹಣ್ಣು?—ಇದು ಗೇರುಹಣ್ಣಿನಂತಾಯಿತೇ? ಮಾವಿನಹಣ್ಣು ಮಿಾರಾ,—'ಮುಂಡಪ್ಪ' ತಿಳಿಯಿತೇ?"

"ಮುಂಡಪ್ಪ ಹಾಳಾದ! ಗೇರುಹಣ್ಣು ಬಿಡಿಸಿ, ಮುಂಡಪ್ಪನಂತೆ! .. ಹೋಗಲಿ ಈಗ, ನಾವು ಒಂದು ಇಲಿ ಗೂಡು ಅಥವಾ ಒಂದು ಬೆಕ್ಕು, ಇವೆರಡರ ಪೈಕಿ ಯಾವುದನ್ನಾದರೂ ತರಲೇಬೇಕು ಯಾವುದಾಗಬಹುದು?"

"ತರಲೇಬೇಕಾದರೆ ಇಲಿ ಗೂಡೇ ಆಗಬಹುದು ಬೆಕ್ಕನ್ನು ತಂದರೆ ಆಗಾಗ ಬಾಣಂತಿಯಾಗುವ ಸಂಭವವಿದೆ! ಇಲಿಗೂಡಿಗೆ ಹೆರುವ ಶಕ್ತಿಯಿಲ್ಲ" ಎಂದೆ

"ಆದರೆ, ಗೂಡುಗಳು ಯಾವಾಗಲೂ ಅತ್ಯಂತ ಕ್ರೂರವಾದುವು ಫಕ್ಕನೆ ಬಡಪ್ರಾಣಿಯ ಕತ್ತನ್ನು ಮುರಿದು, ಫಕ್ಕನೇ ಮರಣ ತರುವುವೆಂದು ನಾವು ಕೇಳುವೆವಾದರೂ, ಹೋಗುವುದು ಇಲಿಯ ಬಾಲ ಮಾತ್ರ! ಇದು ಕ್ರೂರವಲ್ಲವೇ?"

"ಒಪ್ಪುವೆನು ಆದರೆ, ಅವು ಬೆಕ್ಕುಗಳಷ್ಟು ಕ್ರೂರವಲ್ಲ ಮಿಾರಾ! ಬೆಕ್ಕುಗಳು ಇಲಿಯನ್ನೆ ಮುರಿದುಬಿಡುವುವಲ್ಲ! ಮಿಾರಾ, ನಾವು ಈ ಮನೆಯನ್ನು ಹೊಗಬೇಕಾದರೆ ಒಂದು ಮೂಷಿಕ ವಿಮಾಪೋಲಿಸಿಯನ್ನು ಪಡೆಯಬಹುದಿತ್ತು ಇಲಿಗಳಿಗೆ ವಿಮೆ ಇಳಿಸುವರಲ್ಲವೇ?"

"ರಂಗರಾಯರಂತಹವರು ಸತ್ತವರಿಗೆ ವಿಮೆ ಇಳಿಸಿ, ತಾವು ಸತ್ತ ಮೇಲೆ ಮನುಷ್ಯರಿಗೂ ವಿಮೆ ಇಳಿಸಲು ಅಂಜಿಕೆ ಹುಟ್ಟಿದೆಯಂತೆ........ ಓಃ, ನನಗೊಂದು ಆಲೋಚನೆಯಾಯಿತು!—ನೀರುಗೂಡಿನ ವಿಷಯ ಏನು ಹೇಳುವಿರಿ? ಕರುಣೆಯ ಗೂಡಂತೆ!"

ಮಿಾರೆ ಅದನ್ನೆಲ್ಲ ವಿವರಿಸಿದಳು. ಒಳ್ಳೆ ಗೂಡು. ನೋಡುವಾಗ ಗೂಡಿನಂತಿಲ್ಲ ಆದರೆ, ಇಲಿಗಳು ಎಲ್ಲಿದ್ದರೂ ಇದಕ್ಕೇ ಬಂದು ಬೀಳುವುದು ಖಂಡಿತ! ಗೂಡಿನ ಕೆಳಗೊಂದು ನೀರಿನ ಪಾತ್ರೆಯಿದೆ ಒಂದು ಪೆಟ್ಟಿಗೆಯಂತೆ ಅದರ ಮೇಲೆ ಸಾದಾ ನೆಲ ಅದೊಂದು ಚಿಕ್ಕ ಪಾಸಿ ಕಂಭ ಯಾವ ಇಲಿಯಾದರೂ ಇದರ ಮೇಲೆ ನಿಂತು ಪ್ರಾಣಬಿಡಲು ಗೌರವ ಪಡಲೇಬೇಕಾದ ಉಚ್ಚ ತರಗತಿಯ ಗೂಡೆಂದಳು ಮಿಾರೆ

ಮಿಾರೆಯು ಒಂದನ್ನು ಕೊಂಡುಕೊಳ್ಳುವುದೆಂದು ನಿಶ್ಚಯವಾಯಿತು.

"ಆದರೆ",—ಕಣ್ಣು ಕೆಂಪಗೆ ಮಾಡಿ ನುಡಿದೆ—"ನೀನೇ ಅದನ್ನು ನಿತ್ಯವೂ ತಯಾರಿಸಡಬೇಕು ಮೂಷಿಕವಧೆಯೆಂದರೆ ನನಗೆ ಕಳವಳವಾಗುತ್ತದೆ. .....ಮತ್ತು ಮಿಾರಾ, ಇದೊಂದನ್ನು ಒಮ್ಮೆ ಹೇಳು—ಇಲಿಗಳ ವಿಷಯ ನಿನಗೇಕೆ ಅಷ್ಟು ಆಕ್ಷೇಪ?"

"ಅವು ಮರಿಗಳನ್ನಿಡುತ್ತವೆ"

"ಮರಿ? ಆನೆಗಳಿಡುವುದಿಲ್ಲವೇ ಮರಿಗಳನ್ನು? ಮರಿಗಳನ್ನಿಡುವುದೇ ಅವುಗಳ ಕೊಲೆಗೆ ಯೋಗ್ಯ ಕಾರಣವೆಂದು ನನಗೆ ಹೇಳುವಿಯಾ? ಬದಲಾಗಿ, ಸರಕಾರದ ಅಪ್ಪಣೆ ವಿನಾ ಇಲಿಗಳನ್ನು ಕೊಲ್ಲಬಾರದೆಂಬ ಶಾಸನವಿರಬೇಕೆಂದು ನನ್ನ ಅಭಿಪ್ರಾಯ."

"ಮನೆಯನ್ನೆಲ್ಲ ತುಂಬಿಬಿಡುತ್ತವೆ"

"ಒಂದು ಇಲಿಯು ಮರಿಗಳನ್ನಿಡಲಾರದು; ಒಂದು ಇಲಿಯು ಮನೆಯನ್ನು ತುಂಬಲಾರದು ಅಳಿಲನ್ನು ಸಾಕಿದಂತೆಯೆ, ನಾವು ಆ ಒಂದು ಇಲಿಯನ್ನು ಸಾಕಲಾರೆವೇ?" ಎಂದು ವಾದಿಸಿದೆ

"ಆದರೆ, ಒಂದು ಇಲಿಯನ್ನು ಮಾತ್ರ ನಾವು ಇಟ್ಟುಕೊಳ್ಳಲಾರೆವು. ಆ ಬಡಪ್ರಾಣಿಯು ತನಗೊಂದು ಸಂಗಾತಿಯಿಲ್ಲದೆ ದುಃಖದಿಂದ ಮೈಸೊರಗಿ, ಸತ್ತುಹೋದೀತು—ಪಾಪ" ಎಂದು ಆಕ್ಷೇಪ ನುಡಿದಳು ಮಿಾರೆ

"ಇರಲಿರಲಿ. ನೀನೂ ಅದನ್ನು ಹಾಗೆಯೇ ಮಾಡಬೇಕೆಂದೆಣಿಸಿರುವಿ!" ಎಂದೆ.

ಕೆಲವರನ್ನು ಯಾವ ಮಾತೂ ಪರಿವರ್ತಿಸಲಾರದು ಮೀರೆಯನ್ನು ಸಮಾಧಾನಪಡಿಸುವುದು ಅಸಾಧ್ಯವೆಂದು ನನಗೆ ಮಾತ್ರ ಗೊತ್ತು ಮೀರೆ ತರಿಸಿದಳೊಂದು ಗೂಡನ್ನು—ಆದರೆ, ಅದನ್ನು ತಂದ ಮೇಲೆ, ರಾತ್ರೆ, ಮನೆಯ ಅತಿ ಭಯಂಕರ ಸ್ಥಳಗಳನ್ನು ಹುಡುಕಿ ಹೋಗಿ ಇಡಬೇಕಾದ ಕೆಲಸ ಮಾತ್ರ ನನ್ನ ಪಾಲಿಗೇ ಬಂತು.

"ಇದನ್ನೆಲ್ಲಿ ಇಡಬೇಕು—ಮೀರಾ?"

"ಎಲ್ಲಿ ಇಲಿ ಬರುವುದೋ ಅಲ್ಲಿ ಇಡಿರಿ.

ನಿಜ! ಇಲಿ ಬಾರದ ಸ್ಥಳದಲ್ಲಿಟ್ಟು ಪ್ರಯೋಜನವೇನು! "ಆದರೆ, ನಿನ್ನೆ, ಕೊನೆಯ ಬಾರಿ, ಆ ಇಲಿ ಎಲ್ಲಿ ಕಾಣಸಿಕ್ಕಿತ್ತು?"

"ಮಹಡಿಯಿಂದ ಕೆಳಗಿಳಿಯುತ್ತಲೇ ಬಲದಿಕ್ಕಿನಲ್ಲಿ!"

ಒಂದು ಚಕ್ಕುಲಿ ತುಂಡನ್ನು ಆ ಗೂಡಿನ ಮೇಲಿಟ್ಟು, ಅದನ್ನು ಅಲ್ಲಿ ಇರಿಸಿದೆ.......ಮರುದಿನ ಇಲಿಯೂ ಸಿಕ್ಕಿಬಿದ್ದಿತ್ತು—ಗೂಡಿನ ಕೆಳಗಿನ ಪಾತ್ರೆಯಲ್ಲಿ ಸೆರೆಯಾಳಾಗಿ ಬಿದ್ದು ಮಹಾ ದುಃಖದಲ್ಲಿತ್ತು ಆದರೆ, ದುರ್ದೈವವಶಾತ್ ಆ ಪಾತ್ರೆಯಲ್ಲಿ ನೀರನ್ನು ತುಂಬಲು ಮರೆತಿದ್ದೆನಾದ ಕಾರಣ, ಗೂಡಿನ ಮುಚ್ಚಳವನ್ನು ತೆಗೆಯುತ್ತಲೇ, ನನಗೆ ನಮಸ್ಕಾರವೇನನ್ನೂ ಕೊಡದೆ, ಕೃತಘ್ನತೆಯಿಂದ ಪರಾರಿಯಾಯಿತು—ಅಷ್ಟೆ; ಅದಕ್ಕಿಂತ ಹೆಚ್ಚಿನದೇನೂ ಇಲ್ಲ

"ಸಿಕ್ಕಿತೇ?" ಎಂದು ಪ್ರಶ್ನಿಸಿದಳು ಮೀರೆ

ತಲೆಯಲ್ಲಾಡಿಸಿದೆ. "ನಾನು ಹೇಳಿದ್ದೇನೆ ಮೀರಾ, ನಿನಗೆ. ರೋಮ್ ಪಟ್ಟಣವನ್ನು ಒಂದೇ ದಿನದೊಳಗೆ ಕಟ್ಟಲಿಲ್ಲವಂತೆ. ಒಂದೇ ದಿನದೊಳಗೆ ನಾವು ಫಲವನ್ನು ನಿರೀಕ್ಷಿಸಬಾರದು ಸ್ಥೈರಣೆ—ಮೀರಾ, ಕೇವಲ ಸ್ಥೈರಣೆ ನಮಗೆ ಬೇಕಾಗಿದೆ. ಆ ಇಲಿಗೆ ಪ್ರಾಯಶಃ—ಗೂಡು ಹೊಸತಾದ ಕಾರಣ-ಗುರುತಿಲ್ಲ ಅದರೊಳಗೆ ಹೇಗೆ ಪ್ರವೇಶಿಸಬೇಕೆಂಬುದನ್ನು ಅದು ಇನ್ನು ಕಲಿಯಬೇಕಾಗಿದೆ."

ಮರುದಿನ, ಗೂಡಿನ ಮೇಲಿನ ಚಕ್ಕುಲಿ ತುಂಡು ಮಾಯವಾಗಿತ್ತು;

ಇಲಿಯೂ ಕಾಣೆ! ನನ್ನ ತಪ್ಪು!—ಗೂಡಿನ ಕೆಳಗೆ ಪಾತ್ರೆಯನ್ನೆ ಇಡಲು ಮರೆತಿದ್ದೆ!

"ಮೀರಾ, ಚಕ್ಕುಲಿ ತುಂಡು ಈ ದಿನ ಮಾಯವಾಗಿದೆ. ಇಲಿಗೆ ಮೆಲ್ಲನೆ ಗೂಡಿನ ಪರಿಚಯವಾಗುತ್ತಿದೆ" ಎಂದೆ.

"ಆದರೆ, ಅದು ಖಂಡಿತವಾಗಿ ಗೂಡಿನೊಳಗೆ ಬೀಳಬೇಕಿತ್ತಲ್ಲ!"

"ಎಲ—ಕಷ್ಟವಾಯಿತಲ್ಲ! ಏಕೆ ಮೀರಾ?—ಅದು ಬಾಲದಿಂದ ಮೆಲ್ಲನೆ ಆ ಚಕ್ಕುಲಿ ತುಂಡನ್ನು ತೆಗೆದು ತಿಂದಿರಲಾರದೇಕೆ?"

ಮೀರೆ ಆಲೋಚನೆಗೊಳಗಾದಳು

ಆ ರಾತ್ರೆ ನಾನು ಗೂಡನ್ನೂ, ಅದರ ಕೆಳಗಿನ ಪಾತ್ರೆಯನ್ನೂ, ಪಾತ್ರೆಯಲ್ಲಿ ನೀರನ್ನೂ ತಪ್ಪದೆ ಇಟ್ಟೆ ಆದರೆ, ನಡುರಾತ್ರಿ ಎಚ್ಚರ ವಾದಾಗಲೇ ನನಗೆ ನೆನಪಾಯಿತು—ಗೂಡಿನ ಮೇಲೆ ಚಕ್ಕುಲಿ ತುಂಡು ಇಡಲಿಲ್ಲವೆಂದು .

"ಈ ದಿನವೂ ಇಲ್ಲವೆ?" ಎಂದು ಮರುದಿನ ಬೆಳಗ್ಗೆ ಪ್ರಶ್ನಿಸಿದಳು ಮೀರೆ

"ಅದರ ಬಾಲದ ತುಂಡು ಕೂಡಾ ಇಲ್ಲ!" ಎಂದೆ

"ಚಕ್ಕುಲಿ ತುಂಡನ್ನು ಈ ದಿನ ನೀವು ಬದಲಾಯಿಸಬೇಕು ಅದನ್ನು ಆ ಇಲಿ ಸುಲಭದಲ್ಲಿ ಎತ್ತಿಹಾಕಿ ಓಡಿಹೋಗುತ್ತಿದೆಯೆಂದು ತೋರುವುದು. ದೊಡ್ಡ ಸೌತೆಕಾಯಿತುಂಡು ಇಟ್ಟುಬಿಡಿ" ಎಂದು ಸಲಹೆ ಕೊಟ್ಟಳು

ಅಂದು ನಾನು ರಾತ್ರೆ ಒಂಭತ್ತರೊಳಗೇ ಜಾಗರೂಕತೆಯಿಂದ ಗೂಡನ್ನಿಟ್ಟೆ. ಇಟ್ಟುದನ್ನು ಮೀರೆಯೂ ಚೆನ್ನಾಗಿ ಪರೀಕ್ಷಿಸಿದಳು ಊಟ ವಾಗಿ ಮೀರೆ ಶಯ್ಯಾಗೃಹಕ್ಕೆ ಹೊರಟುಹೋಗುತ್ತಲೇ—ಆ ಗೂಡನ್ನು ಮತ್ತೊಮ್ಮೆ ಪರೀಕ್ಷಿಸೋಣವೆನಿಸಿತು ಅಡಿಗೆ ಕೋಣೆಗೆ ಹೋದೆ

ಅಹುದು—ಈ ಬಾರಿ ಆ ಇಲಿ ನಿಜವಾಗಿಯೂ ಗೂಡಿನೊಳಗೇ ಇದೆ! ನೀರಿನ ಪಾತ್ರೆಯಲ್ಲಿ ಪ್ರಾಣದಾಸೆಯಿಂದ ಈಜಾಡುತ್ತಿದೆ! ಬಲು ಚಿಕ್ಕದು—ನಿಮ್ಮ ಬೆರಳಿನಷ್ಟಿರಬಹುದು. ನೀರಿನಾಳಕ್ಕೆ ಹೋಗಿ ಪವಡಿಸಲು ಇನ್ನೇನು ಹೆಚ್ಚು ಕ್ಷಣಗಳಿಲ್ಲವೆನಿಸಿತು. ಒಂದು ಸೌಟನ್ನು ತೆಗೆದು ಅದನ್ನು ಅದ ರಲ್ಲೆತ್ತಿ, ಅಡಿಗೆ ಕೋಣೆಯ ಕಿಟಕಿಯಿಂದ ಹೊರಗೆ ಬಿಸುಡಿದೆ "ಚಿವ್" ಎನ್ನುತ್ತ ಓಡಿಹೋದ ಶಬ್ದ ಕೇಳಿಸಿತು.

ಮಿಾರೆ, ಕೊಠಡಿಯಲ್ಲಿ ಕುಳಿತು, 'ಜ್ಞಾನಸಿಂಧು'ವನ್ನೋದುತ್ತಿದ್ದಳು.

"ಏನಂತೆ ವಿಶೇಷ?" ಎಂದು ಕೇಳಿದೆ

"ಸುಂಪಣ್ಣನೆಂಬ ಕೊಲೆಗಡಕನನ್ನು ಮೂರು ಬಾರಿ ಗಲ್ಲಿಗೇರಿಸಲು ಯತ್ನಿಸಿದುದೂ ವಿಫಲವಾಯಿತಂತೆ. ಅದಕ್ಕಾಗಿ ಮರಣದಂಡನೆಯನ್ನು ರದ್ದುಗೊಳಿಸಿದರಂತೆ."

"ಸರಿ! ಕೊಲೆಗಡಕನಾಗಲಿ ಮತ್ತಾರೇ ಆಗಲಿ—ನಾನೂ ಹಾಗೆಯೇ ಮಾಡುತಿದ್ದೆ!" ಎಂದೆ

ಮಿಾರೆ ನಗುತ್ತ, "ಉದಾಹರಣಾರ್ಥ—ನಮ್ಮ ಇಲಿ?" ಎಂದಳು

"ಅಹುದು" ಎಂದು ಒಪ್ಪಿದೆ

ಆದರೆ, ನನ್ನ ಮುಖವು ಅಪರಾಧದ ಕರಿಛಾಯೆಯಿಂದಾವೃತವಾದುದನ್ನು ಮಿಾರೆ ಕಾಣದೆ, ಪ್ರೇಮದಿಂದ ಒಂದು ಚಿಕ್ಕ ತಫರಾಕು ಹೊಡೆದಳು.

---

# ೩. ಹಾಗಲವಾಡಿಯ ಕುದುರೆ

ಹೊರಗೆ ಮಳೆ ಸ್ವಲ್ಪ ಸ್ವಲ್ಪ ಹನಿಯುತಿತ್ತು ಮನೆಯೊಳಗೆ ಅಕ್ಕಿಕಾಳು ಸ್ವಲ್ಪ ಸ್ವಲ್ಪ ಇತ್ತು ಕಿಸೆಯೊಳಗಿನ ಹಣವೂ ಸ್ವಲ್ಪ ಸ್ವಲ್ಪವಾಗಿತ್ತು ಸ್ವಲ್ಪ ಸ್ವಲ್ಪ ಊಟಮಾಡಿದರೆ ಹೇಗೆ—ಎಂದು ನಾನಾಲೋಚಿಸುತ್ತ, ಪ್ರಪಂಚದ ಅರ್ಥಶಾಸ್ತ್ರಜ್ಞರೆಲ್ಲ ಆತ್ಮಹತ್ಯ ಮಾಡಿಕೊಳ್ಳದೆ ಹೇಗೆ ಇರುವರೆಂದೂ ಆಶ್ಚರ್ಯಪಡುತಿದ್ದೆ

"ಒಂದು ಕುದುರೆ ಕೊಂಡುಕೊಂಡರೆ ಹೇಗೆ?" ಎಂದು ಮಿಾರೆ ಪ್ರಶ್ನಿಸಿದಳು.

"ಅಬ್ಬಿಸೀನಿಯವನ್ನೆ ಕೊಂಡುಕೊಳ್ಳೋಣ!" ಎಂದೆ

"ಏಕೆ?" ಎಂದಳು

"ಕುದುರೆಯೇಕೆ" ಎಂದು ನಾನು ಪ್ರಶ್ನಿಸಿದೆ

"ಗಾಡಿಗೆ ಕಟ್ಟಲಿಕ್ಕೆ" ಎಂದಳು ಮಿಾರೆ.

"ಅಬ್ಬಿಸೀನಿಯವು, ನಾವು ಆ ಗಾಡಿಯಲ್ಲಿ ಕುಳಿತು ಸವಾರಿ ಮಾಡಲಿಕ್ಕೆ!" ಎಂದು ನಾನಂದೆ

"ನಿಮಗೆ ಹುಚ್ಚು!" ಎಂದಳು ಮೀರಿ.

"ನಿನಗೆ ಪೆಚ್ಚು!" ಎಂದು ನಾನಂದೆ

"ಕುದುರೆಯನ್ನು ಕೊಂಡುಕೊಳ್ಳುವುದು ಸಾಧ್ಯ; ಅಬ್ಬಿಸೀನಿಯವು ಅಚಿಂತ್ಯ—"ಎಂದಳು ಮೀರಿ

"ಹೇಗೆ?" ಎಂದು ಕೇಳಿದೆ

"ಉಪಾಯವಿದೆ!" ಎಂದಳು

ಉಪಾಯ ಹೇಳುವುದರಲ್ಲಿ ಮೀರಿ ಬಲು ಜಾಣೆ ತಿಂಗಳಿಗೆ ೩೦ ರೂಪಾಯಿ ಸಂಬಳವಿರುವವನು, ಒಂದು ರೈಲ್ವೆ ಕಂಪೆನಿಯನ್ನು ಹೇಗೆ ಕೊಂಡುಕೊಳ್ಳಬಹುದೆಂಬುದನ್ನು ಆಕೆ ಹೇಳುತ್ತಾಳೆ "......ಏಷು ಮಂತ್ರಿ" ಎಂದೇನೋ ಶ್ಲೋಕವಿರುವುದಲ್ಲಾ —ಮೀರಿ ಆ ಮಂತ್ರಿ!

"ಹೇಳು ಉಪಾಯ!" ಎಂದೆ

ಹೆಂಡತಿಗೆ ಕಾಯಿಲೆಯಾದರೆ, ಸಿನೆಮಕ್ಕೆ ಹೋಗಿ ಆ ದುಃಖವನ್ನು ಕಳಕೊಳ್ಳುವ ಧೀರತನವಿರುವವರಂತೆ, "ಸ್ವಲ್ಪ ಸ್ವಲ್ಪ"ದ ಚಿಂತೆ ಹತ್ತಿದ ನನಗೆ, ಮೀರಿಯ "ಉಪಾಯ"ದಲ್ಲಿ ಒಂದರೆ ತಾಸು ಕಳೆಯೋಣ ವೆನಿಸಿತು.

"ನೋಡಿ .. ಈಗ ನಮ್ಮೊಡನೆ ಇರುವ ಹಣವೆಷ್ಟು?"

"ಏನಿಲ್ಲ"

"ಒಂದೆಂಟಾಣೆಯಾದರೂ ....?"

"ಇದೆಯೆಂದು ಭಾವಿಸೋಣ."

"ಭಾವಿಸಿರಬಾರದು- -ಇರಬೇಕು."

"ಇಲ್ಲ ಮೀರಾ!—ಇದ್ದರೆ ನಾನು ಭಾವಿಸುವವನಲ್ಲ! ಇರಬೇಕೆಂದ ಕೂಡಲೇ ಅದು ಇಲ್ಲಿ ಹುಟ್ಟುವದಿಲ್ಲ!"

"ಆರಾಣೆಯಾದರೂ. . . ?"

"ನಾಲ್ಕೂವರೆ ಆಣೆ ಇದೆ"

"ಸಾಕು. ಆ ನಾಲ್ಕೂವರೆ ಆಣೆ—-ನಮ್ಮ ಬಂಢವಾಳ ಎಂದಿಟ್ಟು ಕೊಳ್ಳಿ. ಅದಕ್ಕೆ, ನಮ್ಮ ಬರುವ ತಿಂಗಳ ಸಂಬಳ ಮೂವತ್ತು ರೂಪಾಯಿ ಕೂಡಿಸಿರಿ."

"ಕೇವಲ ಭಾವನೆಯಾದರೆ ಮಾತ್ರ!—ಹಾಲಿನವಳಿಗೆ—ಅಂಗಡಿಯವನಿಗೆ—ಕೆಲಸದವಳಿಗೆ ಕೊಡುವಾಗ, ನಿಜವಾಗಿ ಕೂಡಿಸುವುದು ಹೇಗೆ ಮಿರಾ?"

"ಅವರು ಒಂದು ನಾಲ್ಕು ತಿಂಗಳು ಸುಮ್ಮನಿರಲಾರರೇ?"

"ಭಾವಿಸೋಣ—ಕೇವಲ ಭಾವನೆ!"

". . . . ಮತ್ತೊಂದು ತಿಂಗಳಲ್ಲಿ ಪುನಃ ಮೂವತ್ತು ರೂಪಾಯಿ—ಅರುವತ್ತು ರೂಪಾಯಿ ನಾಲ್ಕೂವರೆ ಆಣೆಯಾಯಿತು ಅರುವತ್ತರ ಕುದುರೆ, ನಾಲ್ಕೂವರೆ ಆಣೆ—ಅದನ್ನು ತರುವ ಮಜೂರಿ!"

"ಭಾವಿಸೋಣ—ಕುದುರೆ ಬಂತೆಂದು ಭಾವಿಸೋಣ! ಅರಬ್ಬೀ ತರಗತಿಯಲ್ಲ—ನಮ್ಮ ಘಟ್ಟದ ತರಗತಿಯದೊಂದು ಹಳೆ ಮರಿ!. .. .. ಆ ಮೇಲೆ?"

"ಆ ಮೇಲೆ ಎಲ್ಲವೂ ಸುಲಭ ಪುನಃ ಮುಂದಿನ ತಿಂಗಳಿಗೆ ಮೂವತ್ತು ರೂಪಾಯಿ ಬರುವುದು ಅನಂತರ ಮತ್ತೊಂದು ತಿಂಗಳು—ಮೂವತ್ತು ರೂಪಾಯಿ,—ಒಟ್ಟು ಅರುವತ್ತಾಯಿತು ಇನ್ನು ಮೂವತ್ತು ರೂಪಾಯಿ ಸಾಲ ಸಿಕ್ಕಿದರೆ ಒಂದು ಗಾಡಿ—ಹಳತಾದರೂ ಚಿಂತೆಯಿಲ್ಲ—ಕೊಂಡುಕೊಂಡು !"

" . ಮಿರಾ, ನಿಲ್ಲು! ಕುದುರೆ ಸತ್ತುಹೋಯಿತು!"

"ಹೇಗೆ?"

"ಗಾಡಿ ಬರುವ ವರೆಗೆ, ಎರಡು ತಿಂಗಳು ಅದಕ್ಕೆ ಹುರುಳಿ ಇಲ್ಲದಿದ್ದರೆ ಕುದುರೆಗೆ ಭಾವಿಸಲಿಕ್ಕೆ ಬರುತ್ತದೆಯೇ?"

"ಏನಾದರೂ ಮಾಡಿ . "

"ಅದಕ್ಕೆ ಊಟಮಾಡಬೇಡವೆಂದು ಯೋಗಾಭ್ಯಾಸ ಕಲಿಸುವ ಹೊರತು ಮತ್ತಾವ ಉಪಾಯ?"

"ನಮ್ಮ ಹಿತ್ತಿಲಿನ ಹುಲ್ಲು ?"

"ನಮ್ಮ ಹಿತ್ತಿಲಲ್ಲಿ ಕುದುರೆಗೆ ಸಾಕಾಗುವಷ್ಟು ಹುಲ್ಲು ಬೆಳೆದರಾಗಬಹುದು ಆದರೆ, ಕುದುರೆಗಳಿವೆಯೆಂದು ಹುಲ್ಲು ಬೆಳೆವುದಿಲ್ಲ—ಮಣ್ಣಿನ ಗುಣ ನೋಡಿಯೇ ಬೆಳೆಯುತ್ತದೆ."

"ಹುಲ್ಲನ್ನು ತರೋಣ"

"ದುಡ್ಡು?"

"ದುಡ್ಡು ಕೊಡದೆ ಹುಲ್ಲು ಸಿಗದೆಂದು ಬಲ್ಲೆ ದುಡ್ಡು ಕೊಡಬೇಕು; ಮತ್ತೆ ಸ್ವಲ್ಪ ಹೆಚ್ಚು ಸಾಲಮಾಡಿದರಾಯಿತು. ಗಾಡಿ ಬಂದ ಮೇಲೆ, ಸವಾರಿಮಾಡಿಸಿ, ಆ ಸಾಲ ತೀರಿಸೋಣವಂತೆ"

"ಕುದುರೆ ಬಂತೆಂದು ಭಾವಿಸೋಣ—ಅದು, ನಮ್ಮೊಡನೆ ಹುಲ್ಲಿಗೆ ದುಡ್ಡಿಲ್ಲದಾಗ—ದುಡ್ಡೂ ಹುಲ್ಲೂ ಸಾಲ ಸಿಗದಿದ್ದಾಗ—ತೋಟಕ್ಕೆ ಪ್ರಯಾಣ ಬೆಳೆಸಿ ಹೂವಿನ ಗಿಡಗಳನ್ನು ತಿಂದರೆ? ಆ ಮೇಲೆ ಪರರ ತೋಟಗಳಿಗೂ ನುಗ್ಗಿ ಸಸ್ಯಲೋಕವನ್ನೆಲ್ಲ ಧ್ವಂಸಮಾಡಿದರೆ?"

"ಅದನ್ನು ಕಟ್ಟಿಹಾಕಬೇಕು!"

"ಹಸಿದ ಕುದುರೆಗೆ ಹಗ್ಗವು ಈಡೇ? ಮತ್ತೆ, ಹಸಿದುದನ್ನು ಕಟ್ಟಬೇಕೆ? ಅದು ನಮ್ಮ ಗಾಡಿಯನ್ನೆಳೆಯ ಬೇಡವೇ? "

"ನಿಲ್ಲಿ ..."

"ಕುದುರೆಗೆ ಜೀವವಿಲ್ಲವೇ?"

"ನಿಲ್ಲಿ ..."

"ನಮಗೆ ಪ್ರಾಣಿದಯೆ ಇಲ್ಲವೇ?"

"ನಿಲ್ಲಿ ನಿಲ್ಲಿ. ."

"ಗಾಡಿಗೆ ರಿಪೇರಿಗಳಿಲ್ಲವೇ?"

"ನಿಲ್ಲಿ . ."

"ಬಂಡಿಯನ್ನು ಹೊಡೆವವನಿಗೆ ಸಂಬಳ ಇಲ್ಲವೇ?"

"ನಿಲ್ಲಿ . ."

"ಮುನಿಸಿಪಲ್ ಟೇಕ್ಸ್ ಇಲ್ಲವೇ?"

"ನಿಲ್ಲೀ ..... "

"ನನಗೆ ತಲೆ ಇಲ್ಲವೇ?"

"ನಿಲ್ಲಿ—ಽs ..... "

"ನಿನಗೆ ಬೇರೆ ಕೆಲಸವಿಲ್ಲವೇ"

"ಅಯ್ಯೋ ...."

ಅಲ್ಲಿ, ನನಗೆ ಉಸಿರು ನಿಂತಿತು. ಮಿಾರೆ "ಅಯ್ಯೋ" ಎಂದರೆ, ಸಾಮಾನ್ಯ ಸ್ಥಿತಿಯಲ್ಲಿದ್ದ ವಾತಾವರಣವು ಕೆಟ್ಟಿತೆಂದು ಅರ್ಥ. "ಅಯ್ಯೋ" ಎಂದ ಮೇಲೆ ಆಕೆ—

(1) ತವರು ಮನೆಗೆ ಹೊರಡಲು ಸಾಕು
(2) ಬಾವಿಗೆ ಹಾರಲು ಸಾಕು.
(3) ಕನ್ನಡಿಯೊಡೆಯಲು ಸಾಕು
(4) ಕುಳಿತಲ್ಲೆ ನಿದ್ದೆಹೋಗಲೂ ಸಾಕು
(5) ಆ ದಿನ ಅಡುಗೆ ಮಾಡದಿರಲೂ ಸಾಕು

ಇದರಲ್ಲಿ ಯಾವುದೊಂದೂ ಆಗಬೇಕೆಂದು ನಾನು ಇಚ್ಛಿಸುವವನಲ್ಲ

"ಅಯ್ಯೋ ಎನಬೇಡ—ಹಿತವಿಲ್ಲ" ಎಂದೆ

"ನನಗೆ ಕೆಲಸವಿಲ್ಲವೆಂದುದು ಈಗ ನೀವೇ?"

"ಸತ್ಯವನ್ನೆ ಹೇಳಿದೆ ಮರೆಯಬೇಕಾದರೆ ಮರೆವುದೇ! ನೀನೂ ಮರೆತರಾಯಿತು"

"ಮಿದುಳಿರಬೇಕಷ್ಟೆ?"

"ತಲೆಸಿಡಿತ ಇಲ್ಲದಿದ್ದಾಗ ನನಗೆ ಬಲು ಹಗುರ ಕಾಣುತ್ತಿತ್ತು. ಈಗ ತಲೆಸಿಡಿತ ಫಕ್ಕನೆ ಉಂಟಾಗಿದೆ ಇರಬೇಕೆಂದು ನೆನಸಿದ್ದೇನೆ"

"ಗಾಡಿಯುವನಿಗೆ ಸಂಬಳ ಇಲ್ಲವೇ?"

"ಅವನು ಒಳ್ಳೇದಾಗಿ ಕೆಲಸಮಾಡಿದರೆ, ಯಾರು ಅಲ್ಲವೆನ್ನುತ್ತಾರೆ?"

"ಮುನಿಸಿಪಲ್ ಟೇಕ್ಸ್ ಇಲ್ಲವೇ?"

"ವಾರಾಂಟಾದರೂ ಹೊರಡಿಸಿ, ವಸೂಲುಮಾಡುವ ಕೆಲಸ ಅವರದೇ!"

"ನಮಗೆ ಪ್ರಾಣಿದಯೆ ಇಲ್ಲವೇ?"

"ಇಲ್ಲದಿದ್ದರೆ, ನಮಗೆ ಆ ನಾಲ್ಕು ಕಾಲಿನ ಪ್ರಾಣಿಯನ್ನು ಕೊಂಡು ಕೊಳ್ಳುವ ಮನಸ್ಸಾಗುತಿತ್ತೇ?"

"ಕುದುರೆಗೆ ಜೀವವಿಲ್ಲವೇ?"

"ಹದವಾಗಿ ನೆರಳಲ್ಲೆ ಸವಾರಿಮಾಡಿಸಿ, ಹೇಗಾದರೂ ಹುಲ್ಲು ಹಾಕುತ್ತಾ ಇದ್ದರೆ, ಅದು ಚಿರಂಜೀವಿಯಲ್ಲವೇ?"

"ಅದು ನಮ್ಮ ಗಾಡಿಯನ್ನೆಳೆಯುವುದಿಲ್ಲವೇ?"

"ಲಗಾಮು ಕಟ್ಟಿ, 'ಹೈಚ್' ಎಂದು ನಾನೂ ನೀನೂ ಗರ್ಜಿಸಿದರೆ ಅದರ ಸತ್ತ ಅಪ್ಪನೂ ನಾಗಾಲೋಟದಿಂದ ಹೊರಡದೇ?"

"ಹಸಿದ ಕುದುರೆಯನ್ನೆ ಕಟ್ಟಬೇಕೆ?"

"ಹಸಿವಾರಂಭವಾಗುವ ಮೊದಲೇ ಕಟ್ಟಿದರೆ ಅದೇನೂ ಒಲ್ಲೆನೆನ್ನುವುದುಂಟೇ?"

"ಅದು ಪರರ ತೋಟಗಳಿಗೂ ನುಗ್ಗುವುದೇ?"

"ಗಟ್ಟಿ ಬೇಲಿ ಹಾಕದ ತೋಟಗಳು ತೋಟಗಳೇ?"

"ನಮ್ಮ ಹೂಗಿಡಗಳನ್ನು ಅದು ತಿನ್ನುವುದೇ?"

"ಒಳ್ಳೇ ಬುದ್ಧಿಯಿದ್ದ—ಸಣ್ಣ ಹೊಟ್ಟೆಯ—ತೃಪ್ತ ಅಶ್ವವು ಹಾಗೆ ಮಾಡಿದರೆ, ಅದಕ್ಕೆ ಮತ್ತೆ ನಾವು ಕುದುರೆಯೆನ್ನುವುದುಂಟೇ?"

ಆಗಲೇ ಒಂದು ಸಿಡಿಲು!—"ಅಮ್ಮಾ!"

ಅದು ಮಿಾರೆಗೆ! "ಒss" ಎನ್ನುತ್ತ, ಮಿಾರೆ ಬಾಗಿಲು ತೆರೆದಳು.

ನಮ್ಮ ಹೊರಗೆಲಸದವಳು—ತಿಮ್ಮಿ—ಮೂಗು ಮೊಲೆ ಕಡಿಯಲ್ಪಟ್ಟ ಶೂರ್ಪನಖಿಯಂತೆ ನಿಂತಿದ್ದಾಳೆ!—"ಅಮ್ಮಾ, ಈಗಲೇ ಕೊಡಬೇಕು, ಆಣೆ ಪೈ ಒಂದೂ ಬಿಡದೆ, ೨ ತಿಂಗಳಿಂದ ಬಾಕಿಯಾದ ನನ್ನ ಲೆಕ್ಕ ಕೊಡಬೇಕು!"

ಮತ್ತೊಂದು ಉತ್ಪಾತ!—"ಅಪ್ಪಾ!"

ಈ 'ಅಪ್ಪಾ' ನನಗೇ! ತಿಮ್ಮಿಯ ಹೆಗಲ ಮೇಲಿಂದ ಒಬ್ಬ ರಾವಣ ನಿಂತಿದ್ದಾನೆ! ಹಾಲಿನ ವೆಂಕ!—"ಅಪ್ಪಾ, ಮೂರು ತಿಂಗಳಾಯಿತು ಹಾಲಿನ ಲೆಕ್ಕ ಕೊಡದೆ, ಈಗ ನೀವು ಕುದುರೆ ಕೊಂಡುಕೊಳ್ಳುವ ಆಲೋಚನೆಯಲ್ಲಿರುವಾಗ, ನಮ್ಮ ಮನೆಯ ಎಮ್ಮೆಗಳನ್ನು ಸಾಕಲು ನಮಗೆ ಹಣ ಅವಶ್ಯವಿದೆ ಎಂದು ತೋರಿತು!"

ನನಗೆ ತಿಳಿಯಿತು—ನನ್ನ ಮತ್ತು ಮಿಾರೆಯ ಸಂಭಾಷಣೆಯನ್ನು ಆ ತಿಮ್ಮಿಯೂ ಈ ವೆಂಕನೂ ಕೇಳಿ, ತಮ್ಮ ಹಣಕ್ಕಾಗಿ ದಿಗಿಲುಗೊಂಡು, ಇಬ್ಬರೂ ಏಕಕಾಲದಲ್ಲಿ ಲಗ್ಗೆ ಹತ್ತಿ ಬಂದಿರುವರು!

ಮಿಾರೆ ಹೇಳಿದಳು—"ತಿಮ್ಮಿ, ಎರಡು ತಿಂಗಳು ಹೇಗೂ ಆಯಿತು; ಇನ್ನು ಒಂದೆರಡು ತಿಂಗಳು........"

"ಆಗುವುದಿಲ್ಲವಮ್ಮಾ—ನಿಮ್ಮ ಕುದುರೆ ಬಂದು ನಮಗೆ ದುಡ್ಡು ಸಿಗುವಾಗ, ನಮ್ಮ ಮನೆಯ ಕುದುರೆಗಳೆಲ್ಲವೂ ಜೀವಹಿಡಿದು ನಿಲ್ಲುವಷ್ಟು ಶ್ರೀಮಂತರು ನಾವಲ್ಲ ನಮಗೆ ಹೊಟ್ಟೆಯೂ ಇದೆ—ಹಸಿವಿದೆ!"

ವೆಂಕ ನಗುತ್ತಾ ಹೇಳಿದನು: "ಅಪ್ಪಾ, ಹುರುಳಿಯಿಲ್ಲದೆ ನಿಮ್ಮ ಕುದುರೆ ಜೀವಿಸುತ್ತದೆ—ಆದರೆ, ಹುಲ್ಲು ಇಲ್ಲದೆ ನಮ್ಮ ಎಮ್ಮೆಗಳು ಬಾಳುವುದಿಲ್ಲ!"

ನಾನು ಆ ಮಾತುಗಳನ್ನು ಹೇಳಿದ್ದರೆ ಮೀರೆ ಐದು ನಿಮಿಷ "ಹುಲಾ ಹುಲಾ" ಎಂಬ ಹೆಸರಿನ—ನಿಗ್ರೋ ನರ್ತನ ಮಾಡುತಿದ್ದಳು. ತಿಮ್ಮ—ವೆಂಕರ ಎದುರಿಗೆ ಅಂತಹ ನರ್ತನ ಸಂಭ್ರಮವು ಅನುಚಿತವೆಂದು ಆಕೆಗೆ ಆಗಲೇ ಹೊಳೆದು, "ಹುಲಾಹುಲ"ಕ್ಕೆಂದು ಎತ್ತಿದ ಕಾಲನ್ನು ಒಂದು ಬಾರಿ ಮಾತ್ರ ನೆಲಕ್ಕೆ ಬಡಿದು,—"ನಾಳೆ ಒಂದನೇ ತಾರೀಕಿಗೆ ನಿಮ್ಮೆಲ್ಲರ ಹಣ ಕೊಡುವೆನು!" ಎಂದು ಖಂಡಿತ ತೀರ್ಪು ಹೇಳಿ, 'ಶೂರ್ಪನಖಿ ಮತ್ತು ಸಹೋದರನ' ಮುಖದ ಮೇಲೆ ಬಾಗಿಲನ್ನು ದಡಮ್ಮನೆ ಮುಚ್ಚಿ, ಕೆಂಗಣ್ಣಿನಿಂದ ನನ್ನನ್ನು ನೋಡಿದಳು.

ನಾನು ಗಂಟಲನ್ನು ಸರಿಪಡಿಸಿಕೊಂಡು, ಮೀರೆಯ ಕಡೆಗೆ ನೋಡಿ,—"ಅವರು ಮನುಷ್ಯರಲ್ಲ!" ಎಂದೆ.

"ನಿಜ!" ಎಂದಳು

"ಶೂರ್ಪನಖಿ ಮತ್ತು ಅವಳ ಸಹೋದರ!"

"ಆ ಹೆಸರಿನ ಒಂದು ಕೆಟ್ಟ ಕಂಪೆನಿ!—" ಎಂದಳು

"ನಾವು ಇನ್ನೆರಡು ತಿಂಗಳಲ್ಲಿ ಅವರಿಗೆ ಹಣ ಕೊಡುತ್ತೇವೆಂದು ಅವರು ಭಾವಿಸಬಹುದಿತ್ತು!"

ಮೀರೆ ಮೌನವಾಗಿದ್ದಳು ಬಹು ದುಃಖದ ದೃಷ್ಟಿ!

"ನೀನೇ ಭಾವಿಸು ಮೀರಾ, ನಾವು . "

"ನೀವು ಕೆಣಕಬೇಡಿ ನನ್ನನ್ನು—'ಭಾವಿಸು ಭಾವಿಸು' ಅಂತ! ನಾನು ಭಾವಿಸುವುದಿಲ್ಲ!"

"ನೀನು ಭಾವಿಸುವುದಿಲ್ಲವೆಂದು ಭಾವಿಸೋಣ! ಆದರೆ. . . . . ."

"ನನಗೆ ಒಂದಿಷ್ಟು ವಿಷ ತಂದುಕೊಡಿ—ನಾನು ಭಾವಿಸುವುದೇ ಇಲ್ಲ!" ಎಂದಳು.

"ಇಲ್ಲ ಮಾರಾ—ತುಟಿಗಳ ಉಪಯೋಗವು ಅದಕ್ಕಿಂತಲೂ ಒಳ್ಳೆಯದೇ ಇದೆಯೆಂದು ಭಾವಿಸು. ನಾನು ನನ್ನ ಮಾರಿಗೆ ವಿಷ ತಂದುಕೊಡುವವನೆಂದು ಭಾವಿಸಬೇಡ! ನಮ್ಮ ಕುದುರೆ ಬೆಲೆಯಿಲ್ಲದೆ ಬಂದು, ಬಂದಂತೇ ಹೋಯಿತೆಂದು ಭಾವಿಸು—ಮತ್ತು ನಾವು. . . "

"ಆ ಭಾವಿಸುಗಳನ್ನು ಇನ್ನು ಹೇಳಬೇಡ—ತಲೆಸಿಡಿತ ಉಂಟಾಗುತ್ತದೆ!" ಎಂದು ಮಾರಿಯನ್ನಲು,—

"ಇನ್ನು ನಾನು ಹಾಗೆ ಹೇಳುವೆನೆಂದು ಭಾವಿಸಬೇಡ" ಎಂದು ಖಚಿತಪಡಿಸಲು,—

**ಜನಿಸಿರದ ನಮ್ಮ ಆ ಕುದುರೆಯು ಚಿರಂಜೀವಿಯಾದುದು.**

---

# ೪. ಬಹಿಷ್ಕಾರ

ಚುಟ್ಟ ಸೇದುವುದು ಒಂದು ಕಲೆ 'ಆಟಮೆಟಿಕ್' ರಿವಾಲ್ವರಿನಂತೆ, ಹೊಸಬನು, ಯಾವ ದಿಕ್ಕಿನಿಂದ ಅಗ್ನಿಮುಖವೆಂದು ತಿಳಿಯದೆ ಕಂಗಾಲಾಗಿ, ಕೊನೆಗೆ ಬೆಂಕಿಯಿಡುವ ದಿಕ್ಕನ್ನು ಗೊತ್ತುಮಾಡಿಕೊಳ್ಳಲು, ಮತ್ತುಳಿದ ತುದಿಯು ಒಂದೇ ಆಗಿರುವ ಕಾರಣ ಅದನ್ನು ಬಾಯಲ್ಲಿಟ್ಟುಕೊಳ್ಳುವನು. ಅದನ್ನು ಹಿಡಿವ ಕ್ರಮ ತಿಳಿದಾದ ಮೇಲೆ ಎರಡನೆಯ ಕ್ರಮವು ಅದರ ಅಗ್ನಿಮುಖಾನ್ವೇಷಣವಾಗಲು, ಮೂರನೆಯದಾಗಿ ಉಸಿರೆಳೆದು ಊದುವ ಪಾಠವಾರಂಭವಾಗುವುದು. ಬಹುಕಾಲದ ಶ್ರಮದನಂತರ, ಚುಟ್ಟ ಸೇವಕನು ಪೂರ್ಣ ಮನುಷ್ಯನಾಗಿ ಮಾರ್ಪಡಲು,—ಸಾಮಾನ್ಯರಾರೂ ಆತನ ಬಳಿ ಸುಳಿದಾಡಲು ಹೆದರುವ ಗೌರವವು ಉಂಟಾಗಿ . .

. . . .ಇರಲಿ. ಪೈಗಳೊಂದು ಚುಟ್ಟ ಕೊಟ್ಟಿದ್ದರು ಬೆಂಕಿ ಎಲ್ಲಿಡಬೇಕೆಂದು ತಿಳಿಯದೆ ವಿಚಾರದಲ್ಲಿ ಬಿದ್ದೆ. ಕೊನೆಗೊಂದು ಕಡೆಯಲ್ಲಿ ಬೆಂಕಿಯಿಟ್ಟು ಒಂದುಸಿರು ಎಳೆಯಲು, ಹೊಗೆ ಹೊರಡಲಿಲ್ಲ ಚುಟ್ಟದ 'ಸಾಯನ್ಸ್' ಎಲ್ಲಿಯೋ ತಪ್ಪಿದೆಯೆಂದು ಗಾಬರಿಯಾಯಿತು; ಬಲವಾಗಿ ಎಳೆದೆ. ಮುಖವು ನೋಡುತ್ತಿರುವವರಿಗೆ ವಿಕಾರವಾಗಿ ಕಾಣುವಂತಾಗಿರ

ಬೇಕು  ಗಲ್ಲಗಳ ನರಗಳು ಚೂರಾಗಿ, ಒಳಗಿನ ಯಂತ್ರಸಂಯೋಜನೆ ಯಲ್ಲೆಲ್ಲ ಗಾಬರಿಯೆದ್ದಾಗ, ಚುಟ್ಟದಿಂದ ಒಂದು ಪಾವು ಹೊಗೆ ಹೊರಟಿತು ನಂಬಿ ಕೆಟ್ಟವರುಂಟೇ?

"ಚುಟ್ಟದ ಹೊಗೆಯನ್ನು, ಈಗ ಇದ್ದುದಕ್ಕಿಂತ ಪರಿಮಳಕರವಾಗಿ ಮಾಡಿದರೆ, ಒಂದು ಚುಟ್ಟಕ್ಕೆ ನೂರು ಜನರಂತೆ ಸುಖಪಡುವರು" ಎಂದಳು ಮಿಾರೆ.

"ಆರೋಗ್ಯಕರ ಸೂಚನೆ. ಆದರೆ, ಪೈಗಳು ಒಂದು ಕೊಟ್ಟರು, ನಾನು ಸೇದಿದೆ. ಇನ್ನು ಪೈಗಳು ಕೊಡರು, ನಾನು ಸೇದುವಂತಿಲ್ಲ" ಎಂದೆ.

"ಇನ್ನದನ್ನು ಸೇದಿದರೆ ನಾನುಬಹಿಷ್ಕಾರ ಹಾಕುವೆ"ಎಂದಳು ಮಿಾರೆ

"ಬಹಿಷ್ಕಾರ?  " ಎಂದು ಒಂದು ಸ್ವರವು ಎಲ್ಲಿಂದಲೋ ಪ್ರಶ್ನಿಸಿತು. ನನ್ನ ಮೇಜಿನಡಿಯಿಂದ ಯಾರೋ ಮಾತಾಡುವರೆಂದು ಗಾಬರಿಯಾಗಿ ನಾನು ಮೇಜಿನಡಿಗೆ ನೋಡಿ, ಯಾರನ್ನೂ ಕಾಣದೆ ತಲೆಯೆತ್ತಿದಾಗ, ಮಿಾರೆಯ ಮುಂದೆ ನೆರೆಕರೆಯ ಲೀಲು ನಿಂತು, ಮುಖವನ್ನೆಲ್ಲ ಮಿನುಗಿಸಿ, ಕಣ್ಣುಗಳನ್ನು ಉತ್ಸಾಹದಿಂದ ತೆರೆದು ನೋಡುತ್ತಿದ್ದಳು.

"ಚುಟ್ಟದ ವಿಷಯ ಹೇಳಿದೆ  ನನ್ನಿಂದ ಆ ವಾಸನೆ ಸಹಿಸಲಾಗದು ಲೀಲೂ!" ಎಂದು ಮಿಾರೆ, ತಾನು ಕೆಲ ವರ್ಷಗಳಿಂದ ಆ ವಿಷವಾಯು ವನ್ನು ನಿಷ್ಕಾರುಣ್ಯದಿಂದ ಊದುತ್ತಲೇ ಇದ್ದು ತಾನು ಸಹಿಸಿಕೊಂಡೇ ಬಂದಿರುವೆನೆಂಬ ಅರ್ಥ ಹೊರಡುವ ಸ್ವರದಲ್ಲಿ ಹೇಳಿದಳು

"ನಮ್ಮ ಮನೆಯವರು ಚುಟ್ಟ ಎಳೆದಾಗ ನಾನು ಬಾವಿಗೆ ಹಾರುವೆ ನೆನ್ನಲು ಅಂದಿನಿಂದ ನಮ್ಮ ಮನೆಯಲ್ಲಿ ಊದುಬತ್ತಿ ಮಾತ್ರ ಉರಿಸು ತ್ತಿದ್ದೇವೆ" ಎಂದು ಒಂದು ಹೊಸ ಸ್ವರ ಹೇಳಿತು. ನಮ್ಮ ನೆರೆಕರೆಯ ಮತ್ತೊಂದು ರಾಕ್ಷಸಿ!

"ಈಗ ಗಂಡುಸರು ಸೇದದ ವಸ್ತುವೇ ಇಲ್ಲ. ನಮ್ಮ ಮನೆಯವರು ಚಿಲುಮೆಯಲ್ಲಿ ಒಂದು ಕಪ್ಪು ಗುಳಿಗೆ ಹಾಕಿ ಸೇದುತ್ತಾರಪ್ಪ; ಮತ್ತೆ ಬೆಳ ಗ್ಗಿನ ತನಕ ಉಸಿರೆಳೆಯುವುದೇ ಇಲ್ಲ" ಎಂದು ಮೂರನೆ ಸ್ವರವೊಂದು ಹೇಳಿತು  ನೆರೆಕರೆಯ ಸ್ತ್ರೀರೂಪೀಕರಡಿ! ಕಂಗಾಲಾದೆ  ನಿಮಗೆ ತಿಳಿ ಯದೇ ಭೂಮಿಯಡಿಯಿಂದ ಎದ್ದುಬಂದಂತೆ ಬರುವರು

ರಾತ್ರಿ ಕಾಲದಲ್ಲಿ ಮೂವರು ರಾಕ್ಷಸಿಗಳೆದುರು ನಿಲ್ಲುವುದು ಹಿತವಲ್ಲ. ನಾನು ಎದ್ದೆ. ಏಳುತ್ತ, ಒಂದು ಸಾಹಸದ ಕೆಲಸ ಮಾಡುವೆನೆಂದು ಬಗೆದು, "ಆ ಕರಿಯು ಗುಳಿಗೆ ಸೇದುವ ಅಭ್ಯಾಸ ಕೆಟ್ಟದು; ಚೀನದಲ್ಲಿ ಅದಕ್ಕೆ ಮರಣದಂಡನೆ ಇದೆ" ಎಂದೆ.

"ನಿಲ್ಲಿರಿ!" ಎಂದಳು ಮಿಾರೆ ನಿಂತೆ

"ನಮ್ಮ ಕಾಲಡಿಯು ಕುಂಬಳ . . .ಎಂಬ ಗಾದೆ ತಿಳಿದಿದೆಯೋ?" ಎಂದಳು

"ತಿಳಿದಿದೆ, ಅದನ್ನು ನಾನು ಮೆಚ್ಚುವುದಿಲ್ಲ!" ಎಂದೆ

"ಅತಿಥಿಗಳ ಮನಸ್ಸಿಗೆ ನೋವಾಗುವ ಮಾತನ್ನೇಕೆ ನಾವು ಆಡ ಬೇಕು?" ಎಂದಳು

"ಸತ್ಯಮೇವ ಜಯತೇ. . ಚೀನದ ಚರಿತ್ರೆ ದೊಡ್ಡದಿದೆ, ಹೇಳಿ ದುದು ಸ್ವಲ್ಪ" ಎನ್ನುತ್ತ ಚುಟ್ಟದಿಂದ ಹೊಗೆ ಊದಿದೆ ಚುಟ್ಟ ಕೈಯ ಲ್ಲಿದ್ದರೆ ಒಂದು ಬಲ, ಒಂದು ಧೈರ್ಯ

"ಸಾಯಲಿ ಮಿಾರಾ, ಅವರ ಸ್ವಭಾವ ನನಗೆ ಗೊತ್ತು, ವಿನೋದ ಕ್ಕೆಂದಾಡಿದರು" ಎಂದಳು, ಕರಿಯು ಮಾತ್ರ ಸೇದುವವನ ಗೃಹಲಕ್ಷ್ಮಿ

"ಹೋಗಲವ್ವಾ, ಈಗ ನಮ್ಮ ವಿಚಾರ ಮಾತಾಡೋಣ 'ಬಹಿ ಷ್ಕಾರ' ಎಂದುದನ್ನು ಕೇಳಿ ಬಂದೆ. ಆ ಯುಗಾದಿ ರೆಸ್ಟೋರೆಂಟಿನವ ರಿದ್ದಾರಲ್ಲ—ಅವರ ವಿಚಾರ" ಎಂದಳು ಲೀಲು

"ಏನದು?" ಮಿಾರೆ ಕೇಳಿದಳು

"ಕೆಟ್ಟ ತಿಂಡಿ ಮಿಾರಾ; ಕಾಫಿಗೆ ಒಂದೂವರೆ ಆಣೆ, ಹಾಲು ಇಲ್ಲ. ಅಂಬೋಡೆಯಲ್ಲಿ ಎಣ್ಣೆ ಹೆಚ್ಚು, ಉದ್ದು ಕಡಿಮೆ, ನಾವಿದ್ದಲ್ಲಿಗೆ ಕಳಿಸಿರೆಂದರೆ ಕಳುಹುವುದಿಲ್ಲ"—ಲೀಲೂ ಎಂದಳು

ಹೆಂಗುಸರಿಗೆ ಹೊಟೇಲು ಕಾಫಿಯ ಚಟ ಇಷ್ಟು ಹತ್ತಿದೆಯೆಂದು ನನಗೆ ತಿಳಿದಿರಲಿಲ್ಲ. ನಾನು ಮಂಕನಂತೆ ನೋಡಿ, ಆ ಮಂಕನ್ನು ಅವರು ಗುರುತಿಸದಂತೆ "ಜ್ಞಾನಸಿಂಧು"ವನ್ನೆತ್ತಿ ಹಿಡಿದೆ.

"ಒಂದು ದಿನ ದೋಸೆ ಬೇಡವೆಂದು ಹಿಂದೆ ಕಳುಹಿಸಿದ್ದಕ್ಕೆ ಅವರು ತೆಗೆದುಕೊಳ್ಳಲಿಲ್ಲ ಕಡೆಯುವ ಕಲ್ಲಿನ ಮೂರುಲಕ್ಷ ಮರಳಿನ ಕಣಗಳಿದ್ದ

ದೋಸೆಯನ್ನು ತಿಂದರೆ, ಕೆನ್ಸರ್ ಆಗದೇ ಮೀರಾ?"—ಎರಡನೆ ರಾಕ್ಷಸಿ ಕೇಳಿದಳು. ("ಕೆನ್ಸರ್" ಮತ್ತು "ಹಿಸ್ಟೇರಿಯಾ" ಇವೆರಡು ಇಂಗ್ಲಿಷ್ ಶಬ್ದಗಳು ಎಲ್ಲಾ ಹೆಂಗುಸರಿಗೆ "ಲಿವರಿ"ನ ನಂತರ ಚೆನ್ನಾಗಿ ಬಾಯಿಪಾಠ)

"ನೀನೇ ಇದಕ್ಕೆ ತೀರ್ಪು ಹೇಳಬೇಕು ಮೀರಾ!" ಎಂದು ಮೂರನೆ ದಾನವಿಯು ಅಂಗಲಾಚಿ ಕೇಳಿದಳು. ("ಅಂಗಲಾಚಿ" ಎಂದರೆ, ಎಡ ಕೈಯ ಬೆರಳುಗಳನ್ನು ಸೊಂಟದ ಮೇಲಿಟ್ಟು, ಕುತ್ತಿಗೆಯನ್ನು ಎಡಭುಜದ ಮೇಲೆ ತಿರುವಿಹಾಕುವುದು)

ಮೀರೆಗೆ ಕೂಡಲೇ ಮಹಾಮಹೋಪಾಧ್ಯಾಯರ ದೃಷ್ಟಿ ಬಂತು. "ಬಹಿಷ್ಕಾರ" ಎಂದಳು

"ಹಾಗೆಂದರೆ?" ಎಂದು ಕೇಳಿದಳು ರಾಕ್ಷಸಿ ನಂಬ್ರ ಒಂದು.

"ಅವರ ಹೊಟೇಲನ್ನೆ ಬಿಡುವುದು!"

"ಇದೇ ರಸ್ತೆಯ ಈ ಪಕ್ಕದಲ್ಲಿ ಮತ್ತೊಂದು ಹೊಟೇಲು ತೆರೆವರಂತೆ!" ಎಂದು ನೆಗೆದಳು ರಾಕ್ಷಸಿ ನಂಬ್ರ ೨

"ಯುಗಾದಿ ರೆಸ್ಟೊರೆಂಟಿಗೆ ಸೊಪ್ಪು!" ಎಂದಳು ರಾಕ್ಷಸಿ ನಂಬ್ರ ೩.

"ಆದರೆ, ನಿಲ್ಲಿ!" ಎಂದಳು ರಾಕ್ಷಸಿ ನಂಬ್ರ ೦ (ಮೀರೆ!)

"ಏನು?" ಮೂರೂ ನಂಬ್ರಗಳು ಆತುರದಿಂದ ಕೇಳಿದವು

"ಮೊದಲು ಒಂದು ಅರ್ಜಿಮಾಡಬೇಕು ಯುಗಾದಿ ರೆಸ್ಟೊರೆಂಟಿಗೆ! . .

"ಹೊಸ ಹೊಟೇಲು ಈ ರಸ್ತೆಯ ಮೂಲೆಯಲ್ಲಿ ತೆರೆಯಲ್ಪಡುತ್ತದೆ. ಇನ್ನು ನೀವು ಒಳ್ಳೆ ತಿಂಡಿ, ಒಳ್ಳೆ ಕಾಫಿ, ಧರ್ಮದ ಜನ್ನ, ಮತ್ತು ಸಾಲ ಪಾವತಿಗೆ ಹೆಚ್ಚೆಂದರೆ ಮೂವತ್ತು ದಿನಗಳ ವಾಯಿದೆ—ಇಷ್ಟು ಸೌಕರ್ಯ ಕೊಡದಿದ್ದರೆ ನಮ್ಮದೆಲ್ಲ ಬಹಿಷ್ಕಾರ" ಎಂದು ಅದಕ್ಕಾವ ಉತ್ತರ ಬರುವುದೋ ನೋಡೋಣ!"

"ಯುಗಾದಿಯವರು ಕೇಳದಿದ್ದರೆ, ಇಡೀ ರಸ್ತೆಯವರು ಬಹಿಷ್ಕಾರ ಹಾಕಿದರಾಗದೇ?"

"ಸರಿ!"—ರಾಕ್ಷಸಿ ನಂಬ್ರ ೦

"ಗಂಡುಸರೂ ಹಾಗೆ ಮಾಡಬೇಕು"—ರಾಕ್ಷಸಿ ನಂಬ್ರ ೧

"ದೇವರಿದ್ದಾನೆ!" ರಾಕ್ಷಸಿ ನಂಬ್ರ ೨.

"ದೇವರಿರಲಿ ಇಲ್ಲದಿರಲಿ, ನಮಗೆ ಅನ್ಯಾಯ ಕಂಡರಾಗದು!" ರಾಕ್ಷಸಿ ನಂಬ್ರ ೩.

"ಏನು ತಮ್ಮ ಅಭಿಪ್ರಾಯ?" ರಾಕ್ಷಸಿ ನಂಬ್ರ ಂದಿಂದ ನನಗೆ

"ಜ್ಞಾನಸಿಂಧು"ವನ್ನು ಕೆಳಗಿಳಿಸಿದೆ. "ಆಲೋಚನೆ ಒಳ್ಳೆಯದು. ಅರ್ಜಿ ಮಾಡಬಹುದು" ಎಂದೆ.

"ಮಾಡಬಹುದೇ? ಹೇಗೆ? ನೀವೇ ಬರೆದು ಕೊಡಬೇಕು!" ರಾಕ್ಷಸಿ ನಂಬ್ರ ೨

"ಆಗಬಹುದು ಆದರೆ, ಒಂದು ಸುದ್ದಿ ಏನೆಂದರೆ, ಆ ಹೊಸ ಹೊಟೇಲು ತೆರೆಯುತ್ತದಲ್ಲಾ—ಅದು ಇದೇ—ಯುಗಾದಿ ರೆಸ್ಟೊರೆಂಟ್! ಆ ಸ್ಥಳದಿಂದ ಈ ಸ್ಥಳಕ್ಕೆ ಬರುತ್ತಾರೆ ಅಷ್ಟೇ" ಎಂದೆ

ಒಂದು ಸೆಕುಂದಿನ ನೂರನೆ ಒಂದಂಶದೊಳಗೆ ಕೊರಡಿ ಬರಿದಾಯಿತು. ನನ್ನ ಚುಟ್ಟವು ಮುಗಿಯಿತು ಮೀರೆ ನನ್ನನ್ನೆ ನೋಡುತ್ತಿದ್ದಳು

"ಅದು ನಿನ್ನ ತಪ್ಪಲ್ಲ! ಅವರಿಗೆ ವ್ಯಾಪಾರವಾಗುವುದಿಲ್ಲವೆಂದು ಸ್ಥಳ ಬದಲಾಯಿಸುತ್ತಾರೆ!" ಎಂದೆ.

"ನನಗೆ ಬಹಳ ಆನಂದವಾಗಿದೆ ಬಹಳ ವಿನೋದ ನಿಮಗೆ—'ರಮಣಾ' ಎನ್ನುತ್ತ, ಏನುಮಾಡಲಿ?" ಎಂದಳು

"ಬೇಡ. ಆ ಮೂರು ದಾನವಿಗಳಿಂದ ಈ ಕೋಣೆಯನ್ನು ಸುರಕ್ಷಿತ ವಿಟ್ಟರೆ ಉಪಕಾರ!'' ಎಂದೆ.

ಮೀರೆ ಮುನಿದೆದ್ದು ಹೋಗಿ ಆ ರಾತ್ರೆ ನನ್ನನ್ನು ಬಹಿಷ್ಕರಿಸಬೇಕೆ!

---

# ೫. ಮೀರೆಯ ಚಿಕ್ಕಿ

ನಿತ್ಯವೂ ಕಚ್ಚುತಿದ್ದ ನುಸಿಗಳು ಫಕ್ಕನೆ ತಲಾ ನೂರರಂತೆ ಹೆತ್ತು ನನ್ನನ್ನೆತ್ತಿಕೊಂಡುಹೋದ ಸ್ವಪ್ನ! ಹಿಂದಿನ ರಾತ್ರೆ ಯಾರೋ ಒಬ್ಬ 'ಭಾಗವತರ್' ಮಹಾಶಯರು, ನನಗರಿಯದ ಊರಿಂದ ಗ್ರಾಮಫೋನ್ ರಿಕಾರ್ಡಿನಲ್ಲಿ ಮಡಗಿಕೊಂಡು ಬಂದು ನಾವಾರೂ ತಿಳಿದಿರದ ಭಾಷೆಯಲ್ಲಿ ಹಾಡಿ ನನ್ನನ್ನು ಪೀಡಿಸಿ ತೆರಳಿದ್ದರು. ಅತಿ ಭಯಂಕರ ಶಬ್ದಮಾಡುವ ಆ ಗ್ರಾಮಫೋನನ್ನು ನಮ್ಮ ನೆರೆಕರೆಯವರು ಎಲ್ಲಿಂದ ತಂದರೆಂದು ಮೀರೆ ಯೊಡನೆ ಕೇಳಿದೆ. ತನಗರಿಯದೆಂದಳು ನಾನು ಹಾಗೇಕೆ ಕೇಳಿದೆನೆಂದೂ

ಅವಳದೊಂದು ಪ್ರಶ್ನೆ "ನಮಗೊಂದು ಗ್ರಾಮಫೋನು ಮುಂದೆ ಯಾವಾಗಲೂ ಬೇಕಾದರೆ ಈ ಜಾತಿಯನ್ನು ನಾವು ಕೊಂಡುಕೊಳ್ಳದಂತೆ ಎಚ್ಚರವಿರಬೇಕು!'' ಎಂದೆ. ನಮ್ಮ ನೆರೆಕರೆಯವರು ಬಾಡಿಗೆಯನ್ನು ಕ್ರಮವಾಗಿ ಕೊಡುತ್ತಿರುವರೇ? ದಶಾವತಾರ ಆಟದಲ್ಲಿ ಅವರಿಗೆ ಅಭಿರುಚಿ ಉಂಟೇ? ಮುಂತಾಗಿ ಪ್ರಶ್ನಿಸಿ, ಎಲ್ಲದಕ್ಕೂ 'ಇಲ್ಲ'ವೆಂಬ ಉತ್ತರ ಬರಲು, 'ಭಾಗವದರ್' ಮಹಾಶಯರೊಡನೆ ಸ್ನೇಹಕ್ಕಾಗಿ ಯತ್ನಿಸಿ ನಿದ್ದೆಹೋದೆ ಆಗ, ಭಾಗವದರ್ ಮಹಾಶಯರಾರೂ ಕನಸಿನಲ್ಲಿ ಬಾರದೆ ನುಸಿಗಳು ಬಂದು, ಹೆತ್ತು ಹೊತ್ತವು

ವಿಚಿತ್ರ ಪ್ರಯಾಣವಾಗುತಿತ್ತು ಆಗಲೇ, ಆಕಾಶದಲ್ಲಿ ಹೋಗುತಿದ್ದ ಪಾರ್ವತಿಗೆ ಭೂಲೋಕದಲ್ಲಿನ ರೋದನ ಕೇಳಿದಂತೆ ನನಗೆ 'ಹಾರಿ ಹಾರಿ' ಎಂದು ಯಾರೋ ಹಾಡಿದುದು ಕೇಳಿಸಿತು ಎಚ್ಚರವಾಯಿತು. ಯಾರೋ ಹಾಡುತಿದ್ದರು 'ರಾಮಕೃಷ್ಣ ಹಾಽರೀ'

ಮೀರೆ ಅಷ್ಟು ಅಸಹ್ಯವಾಗಿ ಹಾಡಲಾರಳು ಎಂದು ನನಗೆ ಗೊತ್ತು. ಕಾಗೆಗಳಿಗೆ ಶಬ್ದೋಚ್ಚಾರಣೆ ಬಾರದು, ಮನುಷ್ಯರಿಗೆ ಅದರಲ್ಲಿಯೂ ಹಾಡುವ ಹೆಂಗುಸರಿಗೆ, ಬೆಳಿಗ್ಯೆ ಒಮ್ಮೊಮ್ಮೆ ಕಫವು ಗಂಟಲಲ್ಲಿ ಅಂಟಿನಿಂತಾಗ ಹಾಡುವ ಪ್ರೇರಣೆಯಾದರೆ ಇಂತಹ ಸ್ವರಗಳು ಹೊರಡಲಾರವೇ?

"ಮೀರಾ, ಇನ್ನು ಹೀಗೆ ಹಾಡಿದರೆ ನಾನು 'ಕರ್ಕಶಗಾನದಂಶ'ವೆಂಬ ಒಂದು ಅನಾರ್ಯ ರೋಗದಿಂದ ಪೀಡಿತನಾಗಿ, ಯಾವ ಮಲೆಯಾಳಿ ವೈದ್ಯನ ಅಥವಾ ಲೆಫ್ಟನೆಂಟ್ ಕರ್ನಲ್ ಡಾಕ್ಟರನ ಕೈಗಳಿಗೂ ನಾಡಿ ಕೊಡಲು ಪುರುಸೊತ್ತಿಲ್ಲದೆ ದಿವಂಗತನಾಗುವೆನು"—ಎಂದು ಗಟ್ಟಿಯಾಗಿ ಕೂಗಿದೆ ಹಾಡು ಫಕ್ಕನೆ ನಿಂತಿತು!

ಮೀರೆ ಓಡಿಬಂದು 'ಶೂಶ್!' ಎಂದಳು ಆದರೆ ಆಕೆಯ ಮುಖ ನೋಡಿ ನನಗೆ ಮೈಝುಮ್ಮೆಯಿತು.

"ನಾನು ಈಗ ಸೌಖ್ಯದಲ್ಲಿದ್ದೇನೆ ಮೀರಾ! ಬೇರೇನು?" ಎಂದು ಕೇಳಿದೆ.

"ಎಂತಹ ಅನರ್ಥಮಾಡುತ್ತೀರಿ ನೀವು! ಈಗ ಹಾಡುತಿದ್ದುದು ಚಿಕ್ಕಿ ಅಲ್ಲವೇ? ದೇವಾ, ಈ ಗಂಡುನರೇ!" ಎಂದು ಕಣ್ಣೀರಿಲ್ಲದೆ ರೋದಿಸಿದಳು

ಚಿಕ್ಕಿ!

ಕಾಲು ತಾಸು ನನಗೆ ಎಚ್ಚರತಪ್ಪಿರಬೇಕು ಮತ್ತೆ, ಕೆಲವರ ಆಗ ಮನದ ವಾರ್ತೆ ಕೇಳಿಯೇ ಮೂರ್ಛೆಹೋಗುವುದು ಗಂಡುಸುತನದ ಲಕ್ಷಣ ವಲ್ಲವೆಂದು ವಿವೇಕ ಮೂಡಿ, ಹಾಸಿಗೆಯಲ್ಲಿ ಎದ್ದು ಕುಳಿತೆ ಚಿಕ್ಕಿ ಬಂದುದು ನನಗೆ ನಿಜವಾಗಿ ಮಹದಾನಂದವನ್ನುಂಟುಮಾಡಿದೆ ಎಂದು ಹೇಳಿ, ಗಂಡುಸರಿಂದ ಪ್ರಮಾದವುಂಟಾದರೂ ಲೋಕದಲ್ಲಿ ನರಗಳ ಅಬಲತೆಯ ಸಂಕಟಗಳುಂಟಾಗುವ ಅನರ್ಥಗಳುಂಟಾಗವೆಂದು ಆಶ್ವಾಸನೆ ಯಿತ್ತು, ಚಿಕ್ಕಿಗೆ 'ಇಲೆಕ್ಟ್ರಿಕ್‌ಲೂಮ್' ಸೀರೆ ಕೊಟ್ಟರೆ ಆಕೆ ಯಾವು ದಾದರೂ ಅಜ್ಞಾತ ಊರಿಗೆ ಹೋಗಲಾರಳೇ ಎಂದು ಕೇಳಿದೆ

ಮೀರೆ ಕೂಡಲೇ ಸಿಡಿದೆದ್ದಳು. ಗಂಡುಸರು ಅತಿ ಅಗಲಕಿರಿದೆದೆ ಯವರೆಂದು ಪ್ರಕೃತಿ ವಿರುದ್ಧವಾದ ಪ್ರಕಟಣೆ ಕೊಟ್ಟಳು; ಪುರುಷ ಜಾತಿಗೆ ತಂತಮ್ಮ ಹೆಂಡಿರ ಕಡೆಯ ಯಾವ ಹೆಂಗುಸನ್ನು ನೋಡಿದರೂ ಸೇರುವು ದಿಲ್ಲವೆಂದಳು. ನನ್ನಿಂದಾದರೂ ಆಕೆ ವಿಶಾಲ ಹೃದಯ, ಜಾಗತಿಕ ಭ್ರಾತೃಭಾವ, ಪತ್ನಿ ಕುಟುಂಬ ಪ್ರೇಮಗಳನ್ನು ನಿರೀಕ್ಷಿಸಿದ್ದಳೆಂದಳು. ಇಂದಿನ ಆಕೆಯ ಶೋಧವು ಪ್ರಪಂಚದ ಯಾವುದಾದರೊಬ್ಬ ವಿಜ್ಞಾನಿಯು ವಿದ್ಯುಚ್ಛಕ್ತಿ ಅಥವಾ ಸಸ್ಯಜೀವ ವಿಷಯವನ್ನು ಕಂಡುಹಿಡಿದಷ್ಟೆ ಮಹತ್ವ ಪೂರ್ಣವಾದುದೆಂಬಂತೆ ಹೆಮ್ಮೆಯಿಂದ "ನನಗೆ ತಿಳಿಯಿತು!" ಎಂದಳು

"ನಿನಗೆ ತಿಳಿದರೆ ನನಗೆ ಸಂತೋಷ!" ಎಂದೆ "ಗಂಡುಸರು ಇತರರ ದುಃಖವನ್ನು ನೋಡಿಯೇ ಸಂತೋಷಪಡುವರು!" ಎಂದಳು ಮೀರೆ

"ನಿನಗೆ ನಿಜವಾದ ದುಃಖವುಂಟಾಗಿದ್ದರೆ ಅದು ಚಿಕ್ಕಿಯ ಹಾಡಿ ನಿಂದಾದರೆ, ನಾನೂ ನೀನೂ ಒಂದೇ ತರದ ಸಂಕಷ್ಟದಲ್ಲಿರುವವರು" ಎಂದೆ

ಮೀರೆ ದೊಡ್ಡ ಸ್ವರದಲ್ಲಿ ಅರಚುತಿದ್ದಳು ಆದರೆ ಅಷ್ಟರಲ್ಲೆ ಚಿಕ್ಕಿ ಮತ್ತೊಂದು ಕೊಠಡಿಯಲ್ಲಿ "ತ್ಯಾಚಾಗುಣ ಕೋಣ ಸಾಂಗವಿತ" ಎಂದು ಕನ್ನಡದಿಂದ ಮರಾಠಿಗೆ ವರ್ಗಾಯಿಸಿಕೊಂಡು, ಪುನಃ ಕಫಮಿಶ್ರಣ ಸಂಗೀತ ವನ್ನಾರಂಭಿಸಿದಳು. ನಾನು ಕಣ್ಮುಚ್ಚಿ, ಹಿಂದಿನ ರಾತ್ರೆಯ ಭಾಗವದರ್ ಮಹಾಶಯರನ್ನು ಆಲೋಚಿಸಿ ಚಿಕ್ಕಿಯನ್ನೂ ಭಾಗವದರ್ ಮಹಾಶಯ

ಠನ್ನೂ ತುಲನೆಮಾಡಲು ಯತ್ನಿಸಿ ಸಫಲವಾಗದೆ, ಇಬ್ಬರೂ ಈ ಗೋಳ ದವರಲ್ಲವೆಂದು ತೀರ್ಮಾನಿಸಿದೆ

ಸಂಗೀತವು ಹತ್ತಿರ 'ಹತ್ತಿರಕ್ಕೆ ಬಂತು. ನನ್ನ ಎದೆಯೊಳಗೂ ಬಡಿ ದಾಟ ಹೆಚ್ಚುತ್ತ ಬಂತು ನಾಟಕದಲ್ಲಿ ಹಾಡಿ ಬರುವ ಪಾತ್ರವು ಒಳ ಗಿಂದಲೇ ಹಾಡುತ್ತ ಬರುವಾಗ ತೆರೆಯು ಎತ್ತಲ್ಪಡುವಂತೆ—ಚಿಕ್ಕಿಯ 'ತ್ಯಾಚಾ ಗುಣ'ವು ವಾತಾವರಣದಲ್ಲಿ ತೇಲುತ್ತ ಬಂದಂತೆ ಮೀರೆ ನನ್ನ ಕೊರಡಿಯ ಬಾಗಿಲುಗಳನ್ನು ಭಕ್ತಿಯ ಮುಖಮಾಡಿ ವಿಶಾಲವಾಗಿ ತೆರೆದು ದೂರ ನಿಂತಳು ಮೀರೆಯೂ ನನ್ನ ಬಳಿಯಿಂದ ದೂರ ಸರಿಯುತ್ತಲೇ, ನಿಸ್ಸಹಾಯತೆ ಭಾಸವಾಗಿ ಹೆದರಿದ ನಾನು, ಈಗ ಒಂದು ಅನರ್ಥ ಸಂಭ ವಿಸುತ್ತದೆಂದು ಎದೆ ಗಟ್ಟಿಮಾಡಿಕೊಳ್ಳುವಷ್ಟರಲ್ಲಿ,—ಮೀರೆಯಲ್ಲಿ ಭಕ್ತಿ ಭಾವ—ವಕಾಲತುಭಾವ—ತರ್ಕಭಾವ ಇತ್ಯಾದಿ ಭಾವಗಳನ್ನು ಹುಟ್ಟಿಸಿದ ಯೋಗೀಶ್ವರರೊಬ್ಬರು '. ಚಾಗುಣ ಕೋಣ ' ಎನ್ನುತ್ತಾ ಒಳಗೆ ಪ್ರವೇಶಿಸಿದರು ನಾನು 'ಉಗ್ಗ!' ಎಂದೆ ಯೋಗೀಶ್ವರರು 'ಕೋಣ' ಎಂಬಲ್ಲೆ ಹಾಡು ನಿಲ್ಲಿಸಿ, ಮುಡಿಲಿಂದ ಕನ್ನಡಕ ತೆಗೆದು ಕಣ್ಣಿಗಿಟ್ಟು, ನನ್ನನ್ನೆ ನೋಡುತ್ತ "ಇವನೇ ನಿನ್ನ ಗಂಡ?'' ಎಂದರು.

ಮೀರೆ ಭಕ್ತಿಯಿಂದ ತಲೆಯಲ್ಲಾಡಿಸಿದಳು ನಾನು ಏಳಲಿಕ್ಕೆ ಯತ್ನಿಸಿದೆ. ಆದರೆ ಯೋಗೀಶ್ವರರು ಬಾಗಿಲಲ್ಲಿ ನಿಂತಿದ್ದರು. ದೇಹ ವೇನೋ ಕೃಶ. ಆದರೆ ನಮ್ಮ ಬಾಗಿಲೂ ಅಗಲಕಿರಿದಾದ ಕಾರಣ, ಯೋಗೀಶ್ವರರಂತಹ ತೆಳ್ಳಗಿನ ದೇಹದವರಿಂದಲೂ ನಿರಪರಾಧಿಗಳಿಗೆ ಈ ಬಗೆಯ ಅಪಕಾರವಾಗಬೇಕೆಂಬುದಕ್ಕಾಗಿಯೇ ರಚಿಸಲ್ಪಟ್ಟಂತಿತ್ತು. ನನ್ನ ನರಗಳ ನಿತ್ರಾಣ, ಕೈಕಾಲು ನಡುಗುವುದು—ಹಸಿವು ಇಂಗುವುದು—ಕಣ್ಣಲ್ಲಿ ಬಿಳುಪೇರುವುದು ಮೊದಲಾದ 'ಸ್ತ್ರೀತಾಪಹಾರಿಣಿ' ಔಷಧದ ಜಾಹೀರಾತಿನ ಚಿಹ್ನಗಳು ಇಷ್ಟರೊಳಗೆ ಸ್ವಲ್ಪ ಶಾಂತವಾಗಿ ನಾನು ಯೋಗೀಶ್ವರರ ದೇಹಸೌಂದರ್ಯವನ್ನು ನೋಡಲು ಉದ್ಯುಕ್ತನಾದೆ.

ಯೋಗೀಶ್ವರರು (ಮೀರೆಯ ಚಿಕ್ಕಿ) ನಾಲ್ಕೂವರೆ ಅಡಿ ಎತ್ತರವೂ ಹನ್ನೊಂದು ಇಂಚು ಅಗಲವೂ ಉಳ್ಳ ಒಬ್ಬಳು ಹೆಂಗುಸಾಗಿದ್ದರು. ಅವರ ಕುತ್ತಿಗೆಯಲ್ಲಿ 'ಆದಮನ ಸೇಬುಹಣ್ಣು' (ಇಂಗ್ಲಿಷರು ಕಲಿಸಿದ ಶಬ್ದ!)

'ಪಾಂಡ್ಸ್ ಕ್ರೀಮ್' ಲೇಪದ ಜಾಹೀರಾತಿನಲ್ಲಿ ಒಣಗಿಹೋದ ಹಣ್ಣಿನಂತೇ ಒಣಗಿ, ಇವರು 'ಪಾಂಡ್ಸ್‌ಕ್ರೀಮ್' ಅಥವಾ ಇನ್ನಾವುದಾದರೂ 'ಸ್ನೋ'ವನ್ನು ಉಪಯೋಗಿಸುವುದಿಲ್ಲವೆಂಬುದನ್ನು ಸ್ಪಷ್ಟ ಸಾರುತಿತ್ತು ಅವರ ಕಣ್ಣುಗಳಿಗೆ ಗುಳಿ ಬಿದ್ದಿಲ್ಲ ಆದರೆ 'ಸೀಲ್'. ಎಂಬ ಉತ್ತರ ಧ್ರುವದ ಸಮುದ್ರಪ್ರಾಣಿಯ ಕಣ್ಣುಗಳಂತೆ ಅಮಾನುಷ ರಚನೆಯದಾಗಿದ್ದುವು ಯಾರಾದರೂ ಈ ಚಿಕ್ಕಿ ಯೋಗೀಶ್ವರರಿಗೆ ಅತಿ ಉದ್ದ ಮೂಗು ಇದೆಯೆಂದು ಭಾವಿಸುವುದಾದರೆ ಅವರನ್ನು ನಾನು ನಿರಾಶೆಗೊಳಿಸಬೇಕಾಗಿದೆ ಮೂಗು ಅತಿ ಸಣ್ಣದಾಗಿದ್ದು, ಇದು ಗಾಳಿ ಸೇದಲು ಇರದೆ ಕೇವಲ ಅಲಂಕಾರಕ್ಕಾಗಿ ಉಂಟಾದುದು ಎಂಬ ಭಾವನೆ ಕೊಡುತಿತ್ತು ಆ ಮೂಗಿನೊಳಗೂ ಚಿಕ್ಕಿಯೋಗಿನಿಯವರು (ಇನ್ನು ಇವರನ್ನು ಯೋಗಿನಿ ಎನ್ನಬೇಕಾಗಿದೆ) ದಿನಕ್ಕೆ ಒಂದೊಂದು ಪೆಕೆಟ್ ಪಾರ್ನೆಲ್ ನಸ್ಯವನ್ನು ತುಂಬಿ ಆಕಾರವನ್ನು ಹೆಚ್ಚಿಸಲು ನೋಡಿ ಸಫಲವಾಗದೆ, ತೊಲೆಯ ಡಬ್ಬಿಯೊಳಗೆ ರಾತ್ಲು ನಸ್ಯವನ್ನು ತುಂಬಿಸಿದಂತೆ ಮಾಡಿಬಿಟ್ಟದ್ದರು ಅವರ ಮೂಗಿನಡಿ ಕಾಲುಶತಮಾನದ ನಸ್ಯದ ಅನುಭವದ ಸ್ಪಷ್ಟ ಚಿಹ್ನವಿತ್ತು. ಈ ನಸ್ಯದ ಜಾಹೀರಾತಿನ ಮೇಲ್ದುಟಿಯ ಕೆಳಗೆ ದೇಹವೆಂಬ ಕೋಟೆಯನ್ನು ಕಾವಲುಮಾಡುವ ಸೈನಿಕರು ಪುಷ್ಟವಾಗಿ ಬೆಳೆದು, ಸಾಮಾನ್ಯ ಮನುಷ್ಯರ ಕಾವಲುಗಾರರಂತೆ ಹೆದರಿ ಒಳಗೇ ಅಡಗಿಕೊಂಡಿರದೆ, ಯಾರೋ ಶತ್ರುಗಳನ್ನು ಕೊಂದು ರಕ್ತಮಾಂಸಗಳನ್ನು ಮೈಗೆ ಪೂಸಿಕೊಂಡು, ಸ್ನಾನಮಾಡದೆ ಪುನಃ ರಣೋತ್ಸಾಹದಿಂದ ಹೊರಗೆ ಸಿಡಿದು ನಿಂತಿದ್ದರು! ಇವರಲ್ಲಿ ಕೆಲವರು ಯುದ್ಧಮಾಡಿ ಮಾಡಿ ದಣಿದು ದಿವಂಗತರಾಗಿದ್ದರು ಈ ಮಹಾಯೋದ್ಧರನ್ನು ತಪ್ಪಿಸಿಕೊಂಡು ಹೊರಬರುವ ಸಂಗೀತವು ಹೆದರಿಯೇ ಇರುವ ಕಾರಣ ನಾನು ಸ್ವಲ್ಪ ಹಿಂದೆ ಕೇಳಿದ ಸಂಗೀತವು ಅಷ್ಟು ಅಸಹ್ಯವಿದ್ದುದು ಆಶ್ಚರ್ಯವಲ್ಲವೆಂದು ತಿಳಿದೆ ನನ್ನ ಎದೆಯಳತೆ, ನಿರ್ದಯಭಾವ ಮೊದಲಾದುವುಗಳನ್ನು ಮೊರೆ ಶೋಧಮಾಡಿದ ಒಬ್ಬ ಬೋಸ್ ತರಗತಿಯ ವಿಜ್ಞಾನಿಯಾಗಿದ್ದರೆ ನಾನು ಡಾರ್ವಿನ್ ತರಗತಿಯ ಮಹಾಪುರುಷನೆಂದುಕೊಳ್ಳುವುದರಲ್ಲಿ ಹಿಂಜರಿಯಲಾರೆ.

ಗಾನದೇವತೆಯು ನನ್ನನ್ನೂ ನಾನು ಗಾನದೇವತೆಯನ್ನೂ ನೋಡಿ

ದೆವು. ಇಬ್ಬರ ದೃಷ್ಟಿಗಳೂ ಒಂದಾದುವು ಗಾನದೇವತೆಗೆ ಹೇಗಾಯಿತೊ! ನನಗೆ ಎದೆಗೆ ತೂತುಮಾಡಿ ಒಂದು ರೈಲುಬಂಡಿಯನ್ನು ಒಳಗೆ ಕಳಿಸಿದಂತಾಯಿತು. ಆದರೂ ಕೇವಲ ಒಂದು ಸೈಕಲು ಒಳಗೆ ಹೊಕ್ಕಷ್ಟು ಚಿಕ್ಕ ಪ್ರಮಾಣದಲ್ಲಿ ನಡುಗಿ, ಮುಂದೆ ಬರುವ ಮಹಾಕಂಪನಗಳಿಗೆ ಸಿದ್ಧನಾದೆ

"ಕೇವಲ ಹುಡುಗ!" ಎಂದಿತು ಗಾನದೇವತೆ.

ನನ್ನ ಪುರುಷಸ್ಥಾನಕ್ಕಿದು ಅಗೌರವವೆಂದು ತಿಳಿದರೂ ಚಿಕ್ಕಿಯೋಗಿನಿಯು ನನಗೆ "ಕೇವಲ ಹುಡುಗ!" ಎನ್ನಲಿಲ್ಲ ಎಂಬ ಒಂದು ಸಂತೋಷದ ತೆರೆಯೆದ್ದಿತು ಮೀರೆ ನಕ್ಕಳು ಆಕೆಯ ಗಂಡ ಹುಡುಗನೆಂದರೆ ಆಕೆಗೆ ನಾಲ್ಕೂರು ದೊರೆತಂತೆ ನನ್ನ ವಿಷಯ ಆಕೆ ಈ ಮೊದಲು ಆ ಅಭಿಪ್ರಾಯವನ್ನು ಹಲವುಬಾರಿ ಪ್ರಕಟಿಸಿದವಳು ಬುದ್ಧಿಯಲ್ಲಿಯೂ ಪ್ರಾಯದಲ್ಲಿಯೂ ನಾನು ಹುಡುಗನೆಂದು ಆಕೆ ತೀರ್ಮಾನಿಸಿ, ಆಗಾಗ್ಗೆ ಸಮರ್ಥಿಸಿ ಇತರರಿಂದಲೂ ಶಿಫಾರಸುಗಳನ್ನೂ ಅನುಮೋದನೆಗಳನ್ನೂ ಪಡೆಯುತಿದ್ದಳು

ನಾನು ಧೈರ್ಯಗೊಂಡು "ಯಾವಾಗ ಬಂದಿರಿ?" ಎಂದೆ

ನಾನು ಮಾತಾಡುತ್ತಿರುವೆನೆಂದು ಚಿಕ್ಕಿಗೆ ಸ್ವಲ್ಪ ಭರವಸೆಯುಂಟಾಯಿತು "ನಿನ್ನೆಯ ಮೋಟಾರಿನಲ್ಲಿ ಬಂದೆ ಕಾಮಾಕ್ಷಿಯ ಅತ್ತೆಯ ತಂಗಿ ಗೋದುವಿನ ಮನೆಯಲ್ಲಿ ಒತ್ತಾಯಮಾಡಿದರೆಂದು ನಿನ್ನೆ ಅಲ್ಲಿ ನಿಂತು, ಈ ದಿನ ಬೆಳಿಗ್ಗೆ ಐದು ಘಂಟೆಗೆ ಇಲ್ಲಿ ಬಂದೆ!" ಎಂದಳು ಚಿಕ್ಕಿ

"ಸೌಖ್ಯವೇ?" (ನಾನು).

"ಎಂತಹ ನುಸಿ ಗೋದುವಿನ ಮನೆಯಲ್ಲಿ! ನಿನ್ನೆ ನನಗೆ ಐದಾರು ನುಸಿಗಳು ಕಚ್ಚಿ... ಸೂ . ಈಗಲೂ ಅಲ್ಲಲ್ಲಿ ಒಳಗೆ ಹೊಕ್ಕಿ ಕುಳಿತಂತಾಗಿದೆ" ಎಂದಳು ಚಿಕ್ಕಿ

ಭಗವಂತ! ಐದಾರು ನುಸಿ! ಈ ದಿನ ರಾತ್ರಿ ನಮ್ಮ ಮನೆಯಲ್ಲಿ ಚಿಕ್ಕಿಯ ಗತಿಯೇನು? "ತ್ಯಾಚಾಗುಣ ಕೋಣ..." ಎಂದು ಹಾಡುತಿದ್ದ ಈ "ಹಾಡುವ ಅದ್ಭುತ"ಕ್ಕೆ, ಗುಣವಿಲ್ಲದ ನಮ್ಮ ಐದಾರು ಅಬ್ಜ ನುಸಿಗಳು ಕೊಲೆಮಾಡಿದರೆ ಮತ್ತೆ ನಮ್ಮ ಮೀರೆಗೆ ಹಾಡುವ ಚಿಕ್ಕಿಗಳೆಲ್ಲಿಂದ?

"ನಮ್ಮ ಮನೆಯಲ್ಲೂ ಐದಾರು ನುಸಿಗಳಿವೆ" ಎಂದೆ

"ಸುಳ್ಳೇಕೆ ಹೇಳುವಿರಿ?" ಎಂದಳು ಮೀರೆ.

"ಈಗಿನ ಹುಡುಗರಿಗೆ ಸತ್ಯ ಕಲಿಸಿದವರಾರಂತೆ?" ಎಂದು ಚಿಕ್ಕಿ ಮೊದಲನೆ ಬಾಣ ಬಿಟ್ಟಳು

"ನಮ್ಮ ಮೊದಲಿನವರೇ" ಎನ್ನುತಿದ್ದೆ ಆದರೆ, ಮೀರೆಯು ಚಿಕ್ಕಿ ಯನ್ನು ಪ್ರಥಮ ದರ್ಶನದಲ್ಲೆ ಅಪಮಾನಮಾಡುವುದೇ?

"ಬಂಧು—ಬಳಗ—ತಂದೆ—ತಾಯಿ–ಯಾರೂ ಈಗಿನ ಹುಡುಗರಿಗೆ ಇಲ್ಲ" ಎಂದಳು ಚಿಕ್ಕಿ

ಇವರೆಲ್ಲ ಏಕೆ ಅಸ್ತಂಗತರಾದರೆಂದು ಆಶ್ಚರ್ಯಪಟ್ಟೆ

"ಹಿರಿಯರಿಗೆ ಕುಚೇಷ್ಟೆಮಾಡುವುದು ಈಗಿನವರ ಸುಖದ ವೃತ್ತಿ" ಎಂದಳು ಚಿಕ್ಕಿ

ಈಕೆ ನಿರುದ್ಯೋಗ ಖಾನೇಸುಮಾರಿ ಇಲಾಖೆಯಲ್ಲಿ ಕೆಲಸನೋಡಿ ಕೊಂಡಿದ್ದಳೇ ಎಂದೆಣಿಸಿದೆ

"ದೇವರ ನಾಮವನ್ನು ಹಾಡಿದರೆ ಈಗಿನವರಿಗೆ ಕರ್ಕಶವಾಗುತ್ತದೆ; ಸಿನೆಮಾ ಹಾಡುಗಳನ್ನು ನರಿ ಕೂಗಿದಂತೆ ಹಾಡುತ್ತಾರೆ" ಎಂದಳು.

ನನಗೆ ಮೃಗದ— ಅದರಲ್ಲೂ ಚತುಷ್ಪಾದ ಪ್ರಾಣಿಗಳಲ್ಲಿ ಅತಿ ಹೇಡಿ ಯೆಂದು ಹೆಸರಾದ ಮೃಗದ—ಹೆಸರಿಡುತ್ತಲೇ ನನ್ನ ತಾಳ್ಮೆಯೆಲ್ಲ ಮುಗಿ ಯಿತು ಚಿಕ್ಕಿಯ ಮಹಾಯೋದ್ಧರು ನನ್ನನ್ನು ಹಿಡಿಯಲು ಬರುವರೆಂಬ ಭಯವನ್ನೆಲ್ಲ ನೀಗಿ, ಆ ಕೊಠಡಿಯಿಂದ ಪ್ರಚಂಡ ರೀತಿಯಲ್ಲಿ ನಿಷ್ಕ್ರಮಣ ಮಾಡಿದೆ

ನಾನು ಹಿಂದೆರಳುವಾಗ ಚಿಕ್ಕಿ ನಮ್ಮ ಅಡುಗೆಕೋಣೆಯಲ್ಲಿ ಒಲೆಯ ಬಳಿ ಕುಳಿತು "ಕಂಡು ಕಂಡು ನೀಯೆನ್ನ ಕೈಬಿಡುವರೇ ರಾಮಾ" ಎನ್ನು ತಿದ್ದಳು. ಮೀರೆ ಅಂತಃಪುರದಲ್ಲಿ ಕುಳಿತು 'ಜ್ಞಾನಸಿಂಧು'ವನ್ನೋದು ತಿದ್ದಳು

ನಾನು ಮುಖವನ್ನು ಜ್ಜುತ್ತ—"ಚಿಕ್ಕಿಯವರು 'ಕೈಬಿಡುವರೇ ಕೃಷ್ಣಾ' ಎನ್ನದೆ 'ರಾಮಾ' ಎನ್ನುವರೇಕೆ?" ಎಂದು ಕೇಳಿದೆ.

"ಅವಳ ಗಂಡನ ಹೆಸರು ಕೃಷ್ಣ ಎಂದಾಗಿತ್ತು" ಎಂದಳು ಮೀರೆ

"ಅವಳ ಗಂಡನಿಗೆ ಯಾವ ಕಾಯಿಲೆಯಾಗಿ ತೀರಿಹೋದರು?" ಎಂದು ಕೇಳಿದೆ

ಮಾರಿ ತಲೆಯೆತ್ತಿ "ಏಕೆ?" ಎಂದಳು

"ಅವರು ಗಾನಪ್ರಿಯರಾಗಿದ್ದರೋ ಎಂದು! ಕೆಲವರನ್ನು ಗಾಯನವೇ ಕೊಲ್ಲದೇ?"

"ಪಶುಗಳಿಗಿಂತಲೂ ಕೀಳಾದವರನ್ನು ಗಾಯನವು ಕೊಲ್ಲಬಹುದು"

"ಪಶುವಿಗಿಂತ ಕೀಳಾದ ಜೀವಿಯನ್ನು ಯಾಕೆ ಚಿಕ್ಕಿಗೆ ಲಗ್ನಮಾಡಿ ಕೊಟ್ಟರು?" ಎಂದು ಕೇಳಿದೆ

ಮಾರಿಗೆ ರೇಗಿತು "ನೀವು ಚಿಕ್ಕಿಗೆ ಒತ್ತಾಯದಿಂದ ಅಪಮಾನ ಮಾಡುವುದಾದರೆ ನಾನೂ ಚಿಕ್ಕಿಯೂ ಇಲ್ಲಿಂದ ಹೋಗುವೆವು" ಎನ್ನುತ್ತ, ಚಿಕ್ಕಿಯು ಆಕೆಯ ಕುಟುಂಬದಲ್ಲೊಂದು ರತ್ನವೆಂದೂ, ಚಿಕ್ಕಿಗೆ ಮದುವೆ ಯಾದ ಏಳು ದಿನಗಳಲ್ಲೆ ಗಂಡನು ಆಕಸ್ಮಿಕವಾಗಿ ಮೈಯೆಲ್ಲ ಕಪ್ಪೇರಿ ಕಾಲ ವಾದುದರಿಂದ ಚಿಕ್ಕಿಯು ಅಖಂಡ ವೈರಾಗ್ಯ ತಾಳಿ, ದೇವರ ಕೀರ್ತನೆ ಗಳನ್ನು ಕಲಿತು, ಮಾನವಜೀವನದಲ್ಲಿ ಸಾರವಿಲ್ಲವೆನ್ನುತ್ತ, ತೀರ್ಥಯಾತ್ರೆ ಗಳನ್ನು ಮಾಡುತ್ತಾ, ವರ್ಷವಿಡೀ ಬೇರೆಬೇರೆ ನೆಂಟರಲ್ಲಿ ಹೋಗಿ ಎರಡೆರಡು ತಿಂಗಳು ನಿಂತು,—ಎಲ್ಲ ಮನೆಗಳಲ್ಲಿ ಸುವ್ಯವಸ್ಥೆ ಸ್ಥಾಪಿಸುತ್ತಿರುವಳೆಂದೂ; ಆಕೆಗೆ ಸ್ವಾರ್ಥವಿಲ್ಲವೆಂದೂ, ತನ್ನವರ ಉನ್ನತಿಯೇ ಆಕೆಯ ಇಹದ ಕಾಂಕ್ಷೆಯೆಂದೂ, ಮೂರು ಫಲಾಹಾರ ಒಂದೂಟಗಳೊಳಗೆ ಆಕೆಯ ದಿನದ ವ್ಯಯ ಮುಗಿಯುತ್ತಿದೆಯೆಂದೂ, ಜಿಲ್ಲೆಯ ಆರು ಮನೆತನಗಳಲ್ಲಿ ಚಿಕ್ಕಿಗಾಗಿ ವರ್ಷವೆಲ್ಲ ಶಾಶ್ವತ ಬೇಡಿಕೆ ಇದೆಯೆಂದೂ; ಬಾಲಯೋಗಿನಿಯನ್ನು ತುಚ್ಛೀಕರಿಸುವ ಪುರುಷರು ಹೃತ್ಕೋಶದಲ್ಲಿ ಮೃದುಭಾವನೆಯು ದಿವಾಳಿ ಯಾದ ದುರ್ಭಾಗಿಗಳೆಂದೂ ಹೇಳಿ, ನಾನು ಅದನ್ನೆಲ್ಲ ಅಲ್ಲಗಳೆವ ಧೈರ್ಯ ಇದ್ದರೆ ಮುಂದೆಬರಬೇಕೆಂದು ಕಣ್ಣುಗಳಿಂದಲೇ ಆಹ್ವಾನ ಕೊಟ್ಟಳು.

"ನಾನು ಅಪಮಾನಮಾಡಿಲ್ಲ ಮಾರಾ! ಕೆಲವು ಸತ್ಯ ಸಂಗತಿಗಳನ್ನು ತಿಳಕೊಳ್ಳುವ ಆಸೆಯಾಯಿತು, ಅಷ್ಟೆ ಚಿಕ್ಕಿ ನನಗೆ ನರಿಯೆಂದಿದ್ದಾಳೆ ಹಿರಿಯರಿಗೆ ದ್ರೋಹಮಾಡುವವನೆಂದಿದ್ದಾಳೆ; ನಾನೇನು ಮನೆಬಿಡುವೆ ನೆಂದಿರುವೆನೇ? ನಿಜವಾಗಿ ಚಿಕ್ಕಿಯನ್ನು ನೋಡಿದರೆ ನನಗೆ ಮಿನಾಕ್ಷಿ ದೇವಸ್ಥಾನಕ್ಕೆ ಹೋದಂತೆ ಆಗುತ್ತದೆ. ಚಿಕ್ಕಿಯೊಬ್ಬಳನ್ನೇ ನೀನು ಒಲೆಯ ಬಳಿಯೇಕೆ ಬಿಟ್ಟಿರುವೆ?"

"ಆಕೆಗೆ ತಾನೇ ಅಡುಗೆ ಮಾಡಬೇಕು  ನಾನು ಮುಟ್ಟಿದರೆ ತಿನ್ನೊಲ್ಲಳು."

"ಅದೊಂದು ಸುಖ  ಆದರೆ, ಒಳ್ಳೆ ಪಕ್ವ ಮಾಡುವಳೇ?  ಅರರೆ ಇದೇನು ನನ್ನ ಮಂಚ, ನಕ್ಷೆಗಳು  . . ಇವೆಲ್ಲ ಎಲ್ಲಿ? ಈ ಹೊಸ ನಕ್ಷೆಗಳೇನು?" (ನನ್ನ ಕೋಣೆಯಿಂದ ಮಂಚ ಮಾಯವಾಗಿತ್ತು  ಒಳ್ಳೊಳ್ಳೆಯ ನಕ್ಷೆಗಳು ಮಾಯವಾಗಿ ಕೋದಂಡರಾಮ  .ತಿರುಪತಿ ದೇವರು... ಬಂದು ಅಲ್ಲಿ ಕುಳಿತಿದ್ದರು )

"ಚಿಕ್ಕಿ ಕೋಣೆಯಲ್ಲೆಲ್ಲ ಹೀಗಿರಬಾರದೆಂದಳು!" ಎಂದಳು ಮಾರಿ.

ಕಂಗಾಲಾದೆ  ಚಿಕ್ಕೀ  ಮಹಾತ್ಮ್ಯೆಗಾರಂಭವಾಯಿತೆಂದೆಣಿಸಿದೆ ಚಿಕ್ಕಿಯೇ ತನಗೆ ಮೃತ್ಯುವಲ್ಲವಾದರ ನನ್ನನ್ನು ಕೊಲ್ಲುವವರು ಯಾರೂ ಇರರೆಂದೆಣಿಸಿದೆ  ಮಾರಿ ಈ ಕುಟುಂಬದಲ್ಲಿ ಜನ್ಮತಾಳಿದುದಕ್ಕೆ ಮರುಗಿದೆ ಚಿಕ್ಕಿಯನ್ನು ದಸ್ತಗಿರಿಮಾಡಿಸುವುದು ಸಾಧ್ಯವಿಲ್ಲ, ಸುಸಿಗಳಿಗೆ ಒಯ್ಯಿರೀಕ ಯನ್ನು ಎಂದರೆ ಹೆದರದೆ ಇರಲಾರವು, ನಡುರಾತ್ರೆ ಭೂತಚೇಷ್ಟೆಮಾಡಿ ಹೆದರಿಸೋಣವೆಂದರೆ—ಕತ್ತಲಲ್ಲಿ ಚಿಕ್ಕಿಯ ಹಲ್ಲುಗಳು ಹೊಳೆದರೆ ಭೂತದ ಎಲ್ಲ ಚೇಷ್ಟೆಗಳಿಗೂ ವಿರಾಮ, ಕೊಂದರೆ ಈ ಕೊಡಲಿರಾಮನನ್ನು ಕೊಡಲೀ ಮತ್ತು ಜನಿವಾರ ಸಹಿತ ಪಾಸಿಗೇರಿಸುವರು, 'ಹೋಗು!' ಎಂದು ಗಟ್ಟಿಯಾಗಿ ಕೂಗಿದರೆ 'ಮಾರೆಯ ಮನೆ, ನಿನಗೇನು ಮುಸುಡು!' ಎಂದಾಳು 'ಹೋಗಬೇಡ!' ಎಂದರೆ ಇಲ್ಲೆ ಶಾಶ್ವತವಾಗಿ ಇದ್ದು ನಂಜುನುಡಿಗಳನ್ನಾಡಿ ಬೆಳೆದು, ಸಮಾಧಿಹೊಂದುವ ದಿನಗಳನ್ನು ದೂರವಿರಿಸಿಯಾಳು, ನಡುರಾತ್ರಿ ಕೈಕಾಲುಕಟ್ಟಿ ಕಾರ್ಕಳಕ್ಕೆ ಹೋಗುವ ದಾರಿಗೊಯ್ದುಬಿಡುವೆನೆಂದರೆ ಚೀರಿ ಭೂಕಂಪವನ್ನುಂಟುಮಾಡಿಯಾಳು, ನಾನೇ ಹೋದರೆ, ಮಾರೆ ನನ್ನೊಂದಿಗೆ ಹೊರಡಲಾರಳು  ದೇವಾ, ನೀನು ಅನಾಥರಕ್ಷಕನಾದರೆ ನನ್ನನ್ನೇಕೆ ಬಿಡುವೆ? ಎಂದೆನಿಸಿತು.

"ಫಲಾಹಾರಕ್ಕಾಯಿತು" ಎಂದಳು ಚಿಕ್ಕಿ  ಸ್ವರವೇನೂ ಸುಧಾರಿಸಿರಲಿಲ್ಲ. "ಮಾರಾ, ಫಲಾಹಾರ ಮಾಡಬೇಕೆ?" ಎಂದೆ

"ಹಿಂಜರಿಯಬೇಡಿ, ಬನ್ನಿ!" ಎನ್ನುತ್ತ ಮಾರಿ ನನಗೆ ಉತ್ತೇಜನಕೊಟ್ಟಳು. ಅಡುಗೆ ಕೋಣೆಗೆ ಹೋಗಿ ಕುಳಿತೆ  ಮಾರಿ ನನ್ನ ಬಳಿಯೆ ಕುಳಿತಳು.

ಬುದ್ಧನಿಗೆ ಏಳುವರ್ಷಗಳ ಮಹಾತಪಸ್ಸಿನಿಂದ ಅಹಿಂಸೆಯೇ ಮಾನವ ಸುಖಜೀವನದ ಮೂಲವೆಂದು ಹೊಳೆದಂತೆ—ನನಗೆ ಚಿಕ್ಕಿಯು ಏಳು ನಿಮಿಷ ಗಳ ತಾಪದಿಂದೊಂದು ಆಲೋಚನೆಯಾಯಿತು "ಚಿಕ್ಕಿ" ಎಂದೆ.

ಏನದ್ಭುತ! ಚಿಕ್ಕಿಯ ಮುಖವು ಕಾಡಿನಲ್ಲಿ ಬೆಳದಿಂಗಳು ಬಿದ್ದಂತೆ ಬೆಳಗಿತು! "ಏನು ಮಗನೇ?" ಎಂದಳು.

ಪುನಃ ಎದೆಯೊಳಗೆ ರೈಲುಬಂಡಿಯನ್ನು ಬಿಟ್ಟಂತಾಯಿತು ಪುನಃ ಅದು ರೈಲಲ್ಲ, ಸೈಕಲೇ ಆಗಿರಬೇಕು ಎಂದು ಸಮಾಧಾನಮಾಡಿಕೊಂಡು,- "ಚಿಕ್ಕಿ, ಈ ದೋಸೆಯ ಚಟ್ನಿ ಬಹಳ ಚೆನ್ನಾಗಿದೆ!'' ಎಂದೆ

ಚಿಕ್ಕಿ ನಕ್ಕಳು. ಬಹುಶಃ ಕಾಲುಶತಮಾನದಿಂದೀಚೆಗೆ ಆಕೆಗೆ ಯಾವ ಪುರುಷರೂ "ಚಿಕ್ಕಿ" ಎಂದು ಇಷ್ಟು ಪ್ರೇಮದಿಂದ ಸಂಬೋಧಿಸಿರ ಲಿಕ್ಕಿಲ್ಲ ಎಂದುಕೊಂಡೆ

"ಚಿಕ್ಕಿ, ಹಿಂದಿನ ಹೆಂಗುಸರೆಲ್ಲ ಒಳ್ಳೇ ಪಕ್ವಾನ್ನ ಮಾಡಬಲ್ಲರು, ಚಿಕ್ಕಿ!" ಎಂದೆ

ಬೋಂಬು ಸಿಡಿಯಿತು ಚಿಕ್ಕಿಯು ಉತ್ಸಾಹ ಮತ್ತು ತಾತ್ಸಾರದಿಂದ "ಈಗಿನ ಹುಡುಗಿಯರು ಮತ್ತೇನು ಮಣ್ಣು! ಗಂಡನ ಬಳಿ ಕುಳಿತು ಪೆಪರ್ ಮಿಠಾಯಿ ತಿಂದಾರು!" ಎಂದಳು ಹೀಗೆ ಹೇಳುವಾಗ ಮೀರೆಯ ಮುಖವು ಕೆಂಪೇರಿದುದನ್ನು ಕಾಣುವ ಭಾಗ್ಯ ನನಗುಂಟಾಯಿತು!

''ಚಿಕ್ಕಿ, ಹಳಬರು ಗಂಡಂದಿರ ಹೆಸರು ತೆಗೆಯುತ್ತಿದ್ದರೇ?'' ಎಂದೆ

ಚಿಕ್ಕಿ ಹೌಹಾರಿದಳು. "ಹೆಸರು! ಈಗಿನ ಚದುರೆಯರಂತೆ ಅವರು ಮಾನಗೆಟ್ಟವರೇ? ಒಳ್ಳೇ ತಿಳುವಳಿಕೆಯಿದ್ದವರು ಈಗಿನ ಹುಡುಗಿಯರಿಗೆ ಗಂಡನೆಂದರೆ ಭಕ್ತಿ ಕಡಮೆ—ಆಟ ಹೆಚ್ಚು. ಗಂಡನ ಹೆಸರು ಉಚ್ಚರಿಸುವು ದಿರಲಿ, ಅಡ್ಡಹೆಸರಿಟ್ಟು ಕರೆವರು!" ಎಂದು ಹಳೆಹೆಂಗುಸರ ವಿಷಯ ವನ್ನು ವಿವರಿಸುವ ಬದಲು ಹೊಸ ಹುಡುಗಿಯರ ಕತೆಯನ್ನು ಮಾತ್ರ ಹೇಳಿದಳು

ಮೀರೆಯ ಮುಖದ ಮೇಲೆ ಐದು ಬಣ್ಣಗಳು ಬಂದುಹೋದುವು ಆರನೆಯ ಬಣ್ಣವೊಂದು—ಹೆಸರಿಲ್ಲದ ಬಣ್ಣವಾಗಿ ನಿಂತಿತ್ತು. ದೃಷ್ಟಿಸ್ಥಿರ! ನಾಸಿಕ—ಕೆಂಪು! ತುಟಿ—ಕಂಪನಕಾಂಡ! "ಚಿಕ್ಕಿ!" ಎಂದಳು ಮೀರೆ.

ಚಿಕ್ಕಿಯು ಆಕಸ್ಮಿಕವಾಗಿ, ಅತ್ಯದ್ಭುತವಾದ ತಿರಸ್ಕಾರದಿಂದ "ಏನು?" ಎಂದು ಕೇಳಿದಳು

"ಹಳಿಹೆಂಗುಸರ ನಾಲಗೆ ಬಹಳ ಉದ್ದವಾಗಿರಲಿಲ್ಲವೇ?" ಎಂದಳು.

ಚಿಕ್ಕಿಗೆ ಉಸಿರುಕಟ್ಟಿತು ಮೀರಿ ಈ ಪ್ರಶ್ನೆ ಕೇಳುತ್ತಿದ್ದಾಳೆ! "ಏನೇ, ಇಷ್ಟು ಹಾರಿದೆ! ನಾನಾಡುತ್ತಿದ್ದುದು ನಿನಗೇ?" ಎಂದಳು.

"ಮತ್ತಾರಿಗೆ? ನಿನ್ನ ಈಗಿನ ಮಾತಿನಿಂದಲೇ ನನಗೆಂದು ಸ್ಪಷ್ಟವಾಗಿಲ್ಲವೆ?" ಎಂದು ಮೀರಿ ಎದ್ದು ನಿಂತಳು ಚಿಕ್ಕಿಯು ಜೆನ್ನೂ ನೇರಾಯಿತು!

ಇಬ್ಬರು ಮಹಾಯೋದ್ಧರು ಮಹಾಸಂಗ್ರಾಮಕ್ಕೆ ಸಿದ್ಧರಾದರೆಂದು ತಿಳಿಯಿತು ನಮಗೇನು ಕೆಲಸವೆಂದುಕೊಳ್ಳುತ್ತ—"ಮೀರಾ, ಚಿಕ್ಕಿಗೆ ಮುದಿಪ್ರಾಯ; ತಲೆಗೆಟ್ಟು ತಪ್ಪಿ ಒಂದು ಮಾತಾಡಿದರೆ ನೀನು ಬೇಸರಿಸಬಾರದು!" ಎನ್ನುತ್ತ ಸುರಕ್ಷಿತ ಸ್ಥಳಕ್ಕೆ ನೆಗೆದು ನಿಂತೆ

ನೂರಾರು ತುಫಾಕಿಗಳು ಹಾರಿದಂತಾಯಿತು ಅದು ವಾಗ್ಯುದ್ಧವೋ ಕೈ ಕೈ ಹತ್ತಿ ನಡೆವ ಮಹಾಕಾಳಗವೋ ನೋಡುವ ಧೈರ್ಯವೂ ನನಗಿಲ್ಲ. ಎರಡು ಸಿಂಹಿಣಿಗಳು ಕಾಳಗಕ್ಕೆ ತೊಡಗಿದರೆ ಫಲಿತಾಂಶವನ್ನು ಸುಲಭದಲ್ಲಿ ತಿಳಕೊಳ್ಳುವ ಆಸೆಯೂ ಇಲ್ಲ 'ಏಕಬಂಗಲಾ ಬನೇ ನ್ಯಾರಾ!' ಎಂದು ಸಿಳ್ಳು ಹಾಕುತ್ತಾ ನನ್ನ ಟೊಪ್ಪಿ-ಅಂಗಿಗಳನ್ನು ಹಾಕಿಕೊಂಡು ಆಫೀಸಿಗೆ ಪಲಾಯನಮಾಡಿದೆ

ಊಟಕ್ಕೆ ಮರಳುವಾಗ ಚಿಕ್ಕಿ ಇರಲಿಲ್ಲ. ಮೀರೆಯು ಆಕೆಯನ್ನು ಕೊಂದ ನೆತ್ತರಿನ ಕಲೆಗಳು ಅಡುಗೆ ಕೋಣೆಯಲ್ಲಿ ಕಾಣುತ್ತಿರುವುವೇ ಎಂದು ನೋಡಿದೆ ಇಲ್ಲ, ಅಡುಗೆ ಕೋಣೆಯು ಸ್ವಚ್ಛವಾಗಿತ್ತು. ಬಾವಿಗೆ ಹಾರಿದಳೇ ಚಿಕ್ಕಿ ಎಂದೆಣಿಸಿದರೆ—ನನಗೆ ವಾರ್ತೆ ಮುಟ್ಟದೆ? ಅಥವಾ ನಾನು ಬಾರದೆ ಆ ದಿವ್ಯ ದೇಹವು—ಆ ಶ್ಮಶ್ರುವಿಹೀನ ಪುರುಷಾವತಾರವು ಉತ್ತಮಲೋಕದ ಕಡೆಗೆ ಪ್ರಯಾಣ ಬೆಳೆಸುವುದು ಸಾಧ್ಯವಿದೆಯೇ? ಆದರೂ ಮೀರೆಯೊಡನೆ ಕೇಳುವೆನೆಂದರೆ ಧೈರ್ಯವೆಲ್ಲಿ?

ಈಗಲೂ ಕೇಳಿಲ್ಲ; ಮೀರಿ ಹೇಳಿಲ್ಲ. ನನ್ನ ಅನ್ವೇಷಣ ಮುಗಿದಿಲ್ಲ. ಪ್ರತಿದಿನ ಬೆಳಿಗ್ಗೆ 'ರಾಮಕೃಷ್ಣ ಹಾರಿ' ಅಥವಾ 'ತ್ಯಾಚಾಗುಣಕೋಣ' ಎಂಬ ಹಾಡು ಕೇಳಿಸುವುದೇ ಎಂದು ಹೆದರಿಯೇ ಏಳುತಿದ್ದೇನೆ. ಮೊನ್ನೆ

ಪಂಢರಾಪುರಕ್ಕೆ ಹೋಗಿ ಮರಳಿದ ನನ್ನ ಗೆಳೆಯ ಕೇಣು ಚಿಕ್ಕಿಯನ್ನು ತಾನು ದೇವಾಲಯದಲ್ಲಿ ಕಂಡಿರುವೆನೆನ್ನುತ್ತ, "ಆಕೆಯು ನಾಗಸನ್ಯಾಸಿಯೋ ಚಿಕ್ಕಿಯೋ ಹೇಳಬರುವುದಿಲ್ಲ" ಎಂದು ಸಂದೇಹದಲ್ಲೇ ಆಡುತಿದ್ದಾನ

---

# ೬. ಮಾರೆಯ ಮಾವ

ಹೆಂಡತಿಯ ತಾಯಿಗಿಂತ, ಹೆಂಡತಿಯ ತಾಯಿಯ ಸಹೋದರ ಯಾನೆ ಹೆಂಡತಿಯ ಸೋದರಮಾವನು ಸಾಧುವಾದ ಪ್ರಾಣಿಯೆಂದು ಲೋಕದ ಜನರ ನಂಬಿಕೆ. ತನ್ನ ತಂಗಿಗೊಂದು ಹೆಣ್ಣುಮಗು ಹುಟ್ಟಿದರೆ ಒಬ್ಬನು ಹೇಗೆ ಸಾಧುವಾಗುವನೆಂದು ನಾನು ಮಾರೆಗೆ ಪ್ರಶ್ನಿಸಲು "ಅದೆಲ್ಲ ದೊಡ್ಡ ದೊಡ್ಡ ಪ್ರಶ್ನೆಗಳನ್ನು ಕೇಳಬೇಡಿ. ನನ್ನ ಮಾವನು ಸಾಧು—ಪ್ರಾಮಾಣಿಕ—ಸರಳಸ್ವಭಾವಿ -ವಿನಯಶೀಲ . .."ಎಂದು ಮಾರೆಯು, ದಿವಂಗತ ಶ್ರೀಮಂತರ ಕುರಿತು ಪತ್ರಿಕೆಗಳು ಬರೆವ ಕೆಟಲಾಗಿನ ನಕಲನ್ನು ಓದಿಹೇಳಿದಳು.

"ಕರ್ತವ್ಯದಕ್ಷ—ಭೂತದಯಾಪರ—ವಿಶಾಲಹೃದಯಿ—ವಿನೋದ ಭಾಷಿ—ಗುಪ್ತದಾನಿ--ನಿಗರ್ವಿ—ಈ ಗುಣವಾಚಕಗಳನ್ನೂ ಸೇರಿಸಿ, ಅದರ ಕೆಳಗೆ 'ಅವರ ಆತ್ಮಕ್ಕೆ ಶಾಂತಿಯಿರಲಿ' ಎಂದು ಕೂಡಿಸಿ, 'ಅವರ ಕುಟುಂಬಕ್ಕೂ ವಿಶೇಷವಾಗಿ ಸೋದರಸೊಸೆಗೂ ದುಃಖಸಮಾಧಾನ ವನ್ನುಂಟುಮಾಡುವಂತೆ ಪರಮಾತ್ಮನಲ್ಲಿ ಬೇಡಿಕೊಂಡು, 'ಅಂತೆ' ಪತ್ರಿಕೆಗೆ ಕಳಿಸಬಹುದು" ಎಂದೆ. ('ಅಂತೆ' ಪತ್ರಿಕೆಯೆಂದರೆ, ಆ ಪತ್ರಿಕಾಕರ್ತರ ಕಣ್ಣಮುಂದೆ ನಡೆದುದನ್ನೂ ನಂಬದೆ . .ಂತೆ ಎಂದು ಪ್ರಕಟಿಸುವ ನಮ್ಮೂರಿನ ಸೈನಿಕ ಪತ್ರಿಕೆ.)

"ನೀವು ಹೇಳಿದ ಗುಣಗಳೂ ಅಲ್ಲದೆ—ಅವರಲ್ಲಿ ಕವಿತೆಗಳನ್ನು ಬರೆವ ಶಕ್ತಿಯೂ ಇದೆ" ಎಂದು ಮಾರೆ ಕೂಡಿಸಿ, "ಇಂದೇ ಬರುವರು. ಹುಚ್ಚು ಹುಚ್ಚಾಗಿ ಅವರ ಮುಂದೆ ಮಾತಾಡಬೇಡಿ, ತನ್ನ ಅಳಿಯನಿಗಾಗಿ ನಾಚಿಕೆ ಪಡೆವಂತೆ!" ಎಂದಳು

ಅವಳ ಮಾತು ಮುಗಿಯಲಿಲ್ಲ—ಅಷ್ಟರೊಳಗೆ 'ಓಪನ್ ಸಿಸೇಮ್' ಎನ್ನುತ್ತಲೇ ಅಲಿಬಾಬನಿಗೆ ಗನಿಯು ಕದ ತೆರೆದಂತೆ, ನಮ್ಮ ಮನೆ ಮುಂದಿನ ಬಾಗಿಲು ತೆರೆಯಲ್ಪಟ್ಟಿತು. ಆಜಾನುಬಾಹು ಪುರುಷರೊಬ್ಬರು, ವೀರೋಚಿತವಾದ 'ಖದಮ್' ಇಟ್ಟು ಒಳಗೆ ನಡೆದುಬಂದರು ನಾನೂ ಮೀರೆಯೂ ಅವಾಕ್ಕಾದೆವು

"ಮಾವಾ!"—ಮೀರೆ ಮೇಲುಸಿರಲ್ಲಿ ನುಡಿದಳು

"ಸೊಸೆ"ಯೆಂದು ನಾಟಕದಲ್ಲಿ ಕೂಗಿದಂತೆ ಕೂಗಿ, ೨೦ ವರ್ಷಗಳ ವಿರಹತಾಪವು ಕೊನೆಗೊಂಡುದಕ್ಕೆ 'ಮಾವ'ನವರು ಫಕ್ಕನೆ ಮುಂದೆ ಹಾರಿ, ತನ್ನ ಸೊಸೆಯನ್ನು ಬಾಹುಗಳಲ್ಲಿ ಹಿಡಿದು, ಇಬ್ಬರೂ ಕೆಲವು ನಿಮಿಷ ಉಸಿರಿಲ್ಲದೆ ನಿಂತು—ಕೊನೆಗೆ ಬಸಕ್ಕನೆ ಕಣ್ಣೀರಿಳಿಸಿ—ಫಕ್ಕನೆ ಸೆಕುಂದಕ್ಕೆ ಅರುವತ್ತರ ವೇಗದಿಂದ ಕೆಲವು ತಾಸು ಸಂಭಾಷಿಸುವರೆಂದು ನಾನು ನಿರೀಕ್ಷಿಸಿದ್ದೆ ಆದರೆ, 'ಮಾವ' ಮಾತಾಡಲಿಲ್ಲ. ಕಣ್ಣುಗಳನ್ನು ತಿರುಗಿಸಲಿಲ್ಲ ಕೇವಲ ಮುಂದರಿದು ಒಂದು ಮೂಲೆಯನ್ನು ನೋಡಿದರು ಅವರ ಹಿಂದೆ ನಡೆದುಬಂದ 'ಕೂಲಿ'ಯುವನು 'ಮಾವ'ನ ಸಾಮಾನುಗಳನ್ನು ಆ ಮೂಲೆಯಲ್ಲಿ ಕೆಳಗಿಳಿಸಿದನು. 'ಮಾವ'ನವರು 'ಕೂಲಿ'ಗೆ ನಾಲ್ಕಾಣೆ ಯಿತ್ತು, ಒಂದು ಕುರ್ಚಿಯಲ್ಲಿ ರಾಜರೀತಿಯಿಂದ ಕುಳಿತು, ಮೀರೆಯನ್ನೂ ನನ್ನನ್ನೂ ಕ್ರಮವಾಗಿ ನೋಡಿ, ಕಣ್ಣು ಮುಚ್ಚಿದರು

"ಮಾವ!"—ಮೀರೆಯೆಂದಳು

ಮಾವ ಕಣ್ತೆರೆದರು

"ಮಾವ!"—ನಾನಂದೆ

ಮಾವ ಕಣ್ಣು ಮುಚ್ಚಿದರು.

ಸೋತೆನೆಂದೆಣಿಸಿದೆ ಮೀರೆಯ ಸೆರಗು ಹಿಡಿದು, ಬಳಿಯ ಕೊರಡಿಗೊಯ್ದು, ಪಿಸುಮಾತಿನಲ್ಲಿ—"ನಿನ್ನ ಮಾವನ ಉಪಚಾರಕ್ಕೆ ಡಾಕ್ಟರರನ್ನು ಕರೆಸಲೇ?" ಎಂದು ಕೇಳಿದೆ

ಬೇಡವೆಂದಳು. ಮಾವನವರು ಮೊದಲು ಇಲ್ಲಿ 'ಟಿಶ್ಯೂ' ಮದ್ದು ಕೊಡುತಿದ್ದರೆಂದಳು ಆಫ್ರಿಕದಲ್ಲಿ ಇನ್ನೂ ಹೆಚ್ಚಿನ ವೈದ್ಯಕೀಯಜ್ಞಾನ ಪಡೆದಿರಬಹುದೆಂದಳು ಬೇಕಾದರೆ ನಾನೇ ಡಾಕ್ಟರರಿಗೆ ನನ್ನನ್ನು

ತೋರಿಸಿ, ನನ್ನ ಪ್ರಧಾನ ಅಂಗವು ಕ್ರಮದಲ್ಲಿದೆಯೋ ಪ್ರಶ್ನಿಸಬಹುದೆಂದಳು. ಮತ್ತೆ, "ನೀವೀಗ ಹೋಗಿ ಕುಳಿತು, ಮಾವನವರು ಕಣ್ಣು ತೆರೆಯುತ್ತಲೇ, ಚಲೋ ಮಾತುಗಳನ್ನಾಡಿರಿ ಇಲ್ಲವಾದರೆ, ದಯಮಾಡಿ ಅವರ ಮುಖ ಕೂಡ ನೋಡದೆ—ನನ್ನನ್ನೂ ನನ್ನ ಮಾವನನ್ನೂ ನಮ್ಮಷ್ಟಕ್ಕೇ ಬಿಡಿರಿ. ನಿಮ್ಮನ್ನು ಮದುವೆಯಾದುದಕ್ಕೆ—ನಿಮ್ಮ ದಮ್ಮಯ್ಯ—ಇದೊಂದು ಉಪ ಕಾರ ಮಾಡಿರಿ!'' ಎಂದಳು

ಹೆಂಡತಿಯ ಅಪೀಲು ತಳ್ಳಿ ಹಾಕಲಾರೆ ಹೋದೆ—ಕುಳಿತೆ—ಮಾವ ನನ್ನೇ ನೋಡಿದೆ ಮಾವನವರು .. ..

• ಅವರು ಹೇಗಿದ್ದರು!

ಈಗಿನ ಲೋಕವು—ಎಲ್ಲವೂ ಸಂಕ್ಷೇಪವಾಗಿರಲಿ ಎನ್ನುತ್ತಿದೆ ಅದ ಕ್ಕಾಗಿ, ಮಾವನವರು ಹೇಗಿದ್ದರೆಂಬುದನ್ನು ಪೋಲೀಸ್ ಜಾಹಿರಾತಿನಂತೆ ಚುಟುಕಾಗಿ ಹೇಳುತ್ತೇನೆ:—

**ಎತ್ತರ**—ಅಂದಾಜು ೫ ಫೀಟು ೧೧||| ಇಂಚು

**ಎದೆ**—ವಿಶಾಲ ಅಳತೆ ತೆಗೆಯಹೋಗಲು ಅಂಜಿಕೆ.

**ಮುಖ**—ಚಚ್ಚೌಕ ಜಿಂತಾನ್ ಮಾದರಿ.

**ಮೀಸೆ**—ಬಿಳಿ

**ತಲೆ**—ಕಾಣುವುದಿಲ್ಲ. ಜರಿಮುಂಡಾಸಿದೆ. ಒಳಗೆ ಕೂದಲಿರಬಹು ದಾಗಿ ಅನುಮಾನವಡಲಾಗಿದೆ

**ಕಿವಿ**—ಆಫ್ರಿಕಾ ಗಜಕರ್ಣ ಯಾನೆ ಆಫ್ರಿಕದ ಆನೆಗಳ ಕಿವಿಗಳನ್ನು ಹೋಲುತ್ತದೆ

**ಕಣ್ಣು**—ಎರಡು ಆದರೆ, 'ಮಾವ' ಎಂದರೆ ಮುಚ್ಚುವರು

**ಮೂಗು**—ಹದ. ಒಂದು ನುಸಿ ಕುಳಿತಿದೆ ಆಫ್ರಿಕದಲ್ಲಿ ಬಹುಶಃ ದೊಡ್ಡ ನುಸಿಗಳನ್ನು ಕಂಡಿರಬಹುದಾದ ಮಾವನವರಿಗೆ ಈ ನುಸಿ ಕಾಣುವು ದಿಲ್ಲ—ಸ್ಪರ್ಶವಾಗುವುದಿಲ್ಲ

**ಪೋಷಾಕು**—'ಶಟ್‌ಕೋಟು' ಹಲ್ಲಿ ನಕ್ಷೆಗಳನ್ನು ಬಿಡಿಸಿದಂತಿದೆ ಆಫ್ರಿಕದ ಬೆವರು ಸಹಿತ ಆಮದಾದುದು

**ಚಲ್ಲಣ**—ಮೊಣಕಾಲಿಂದ ನಾಲ್ಕೇ ಅಂಗುಲ ಕೆಳಗಿನ ತನಕ ಇದೆ.

ಬಹುಶಃ ಮಾವನವರು ೪ ಫೀಟು ೨ ಇಂಚು ಇರುವಾಗ ಮಾಡಿಸಿದ್ದು. ೫ ಫೀಟು ೧೧॥ ಬೆಳೆವ ವರೆಗೆ ಕಾಯ್ದು ಕೊಂಡು, ಈ ಭರತಭೂಮಿ ಯಲ್ಲಿ ಪ್ರಥಮ ಪ್ರದರ್ಶನ.

**ಪ್ರಾಯ**—೬೦ ಇರಬಹುದು ಧೈರ್ಯವಾಗಿ ಹೇಳಲಾಗದು ೭೦ಕ್ಕೂ ಮುಟ್ಟಿರಬಹುದು ದಾಖಲೆಯಾಗಿ ಹೇಳಲಾಗದು ೫೦ ಇರಲೂ ಬಹುದು ಮೀಸೆ ೬೦ನ್ನೂ ೭೦ನ್ನೂ ಸೂಚಿಸುತ್ತಿದೆ. ಮುಖರೀವಿ ೫೦ನ್ನು ಸೂಚಿಸುತ್ತಿದೆ ಚಲ್ಲಣ ೩೦ ಮಾತ್ರ ಎನ್ನುತ್ತಿದೆ ಆದರೆ, ಮಾರೆ ಹೇಳಿದ ಆಧಾರದಲ್ಲಿ (ಮಾವನವರು ಪೆನ್ಶನ್ ಹೊಂದಿ ಬಂದರೆಂದು) ೫೫ ಎನ್ನ ಬಹುದು

**ಗುಣ**—ಕಳೆದ ತಿಂಗಳ 'ಶುಕವಾಣಿ'ಯಲ್ಲಿ ಪ್ರಕಟವಾದ ದಿವಂಗತ ನಾರಣಪ್ಪನವರ ಗುಣಾವಳಿಯನ್ನು ನೋಡಿರಿ

**ವಿಶೇಷಗುಣ**—'ಕವಿ'ಯೆನ್ನಲಾಗಿದೆ (alleged)

ಹದಿನೈದು ನಿಮಿಷಗಳ ತನಕ, ಶಿವಲಿಂಗದ ಮುಂದೆ ಕುಳಿತು ಕಾದಂತೆ ಕಾಡೆ ಪ್ರತ್ಯಕ್ಷವಾಗಲಿಲ್ಲ ಏಳುವವನಿದ್ದೆ ಅಷ್ಟರಲ್ಲಿ ಗರಗರ ಗಟೀರ್ ಎಂದು ಮಾವಿನಮರದ ದೊಡ್ಡ ರೆಂಬೆ ಮುರಿದ ಶಬ್ದವಾಯಿತು. ಮತ್ತೇನಿಲ್ಲ—ಮಾವನವರು ಶ್ವಾಸವನ್ನು ಬಾಯಿಯಿಂದ ಬಿಡುವುದೋ ಮೂಗಿನಿಂದಲೋ ಎಂಬ ಸಂದೇಹ ತಾಳಿ, ಎರಡರಿಂದಲೂ ಬಿಡಹೋಗಿ ಉಂಟಾದ ಉತ್ಪಾತ! ಕೊನೆಗೆ ಬಾಯಿಯಿಂದ ಬಿಡಬಹುದೆಂದು ನಿರ್ಧ ರಿಸಿದಂತೆ ತೋರುತ್ತದೆ ಬಿಟ್ಟರು. ಕಣ್ಣುಗಳನ್ನೂ ತೆರೆದರು

"ಮಾವ!"—ಎಂದೆ ಮತ್ತೆ, ಕೂಡಲೇ ಕಣ್ಣುಗಳನ್ನು ಮುಚ್ಚುವರೇ ಎಂದು ಆತುರದಿಂದ ನೋಡಿದೆ ಇಲ್ಲ! ಮಾವನವರು ಮತ್ತೂ ವಿಶಾಲ ವಾಗಿ ಕಣ್ತೆರೆದರು. ಮಾತ್ರವಲ್ಲ, ನನ್ನನ್ನು ಚೆನ್ನಾಗಿ ನೋಡುವ ಕೃಪೆ ಯನ್ನೂ ತೋರಿದರು

"ಮಾವ!" ಪುನಃ ಮೆಲ್ಲನೆ, ಮೃದುವಾಗಿ ನುಡಿದೆ

ಕಣ್ಣಿನಿಂದಲೇ ಮಾವನವರು 'ಏನೆ'ಂದು ಪ್ರಶ್ನಿಸಿದರು. ನಾನೂ ಕಣ್ಣಿನಿಂದಲೇ "ಸೌಖ್ಯವೇ ಮಾವ? ಪ್ರಯಾಣದಲ್ಲಿ ಆಯಾಸವಾಯಿತೇ? ತಾವು ಇನ್ನು ಇಲ್ಲೇ ಇರುವ ಕೃಪೆಮಾಡುವಿರಾ?" ಮುಂತಾಗಿ ಕೇಳುತ್ತಿದ್ದೆ.

ಆದರೆ, ನನಗೆ ಆ ಭಾಷೆ ತಿಳಿಯದೆ, ಬಾಯಿಯಿಂದಲೇ— "ಮಾವ! ಆಯಾಸವಾಯಿತೇ?" ಎಂದು ಕೇಳಿದೆ.

ಮಾವನವರು ಉತ್ತರ ಕೊಡಲಿಲ್ಲ. "ಸ್ನಾನಗೃಹವೆಲ್ಲಿ?" ಎಂದು ಕೇಳಿದರು.

"ಕೊಂಚ ಕಾಫಿ ಕುಡಿವಿರಾ ಮೊದಲು?" ಎಂದು ವಿನಂತಿಸಿದೆ.

ಮಾವನವರು ಸ್ಥಿರದೃಷ್ಟಿಯಿಂದ ಎರಡು ಕ್ಷಣ ನೋಡಿ, "ಈ ಮನೆಗೆ ಬಾಡಿಗೆಯೇನು?" ಎಂದು ಕೇಳಿದರು

"ಆರು ರೂಪಾಯಿ—ಮಾಡು ಸೋರುತ್ತದೆ ಬಚ್ಚಲುಕೊಟ್ಟಿಗೆಗೆ ಒಂದು ಬಾಗಿಲಿಲ್ಲ ತಾವು ಕೊಂಚ ಫಲಾಹಾರ ... !" ಎಂದೆ

ಪುನಃ ಮಾವನವರು ನನ್ನನ್ನ ದಿಟ್ಟಿಸಿ, "ಮೀರೆಗೆ ಮದುವೆಯಾಗಿ ಎಷ್ಟು ವರ್ಷವಾಯಿತು?" ಎಂದು ಪ್ರಶ್ನಿಸಿದರು.

"ಏಳು ನಾನೇ ಗಂಡ. ಅತ್ಯಂತ ಸ್ನೇಹದಲ್ಲಿದ್ದೇವೆ ಫಲ—ಒಂದು ಹೆಸರು-ಸುಪ್ರು ಜಾತಿ-ಗಂಡು. ತಾವು ಒಂದಿಷ್ಟು ಬಾಯಾರಿಕೆ. !" ಎಂದೆ.

ಮಾವನವರು ಮತ್ತೆ ನಾಲ್ಕು ಕ್ಷಣ ನನ್ನ ಕಡೆಗೆ ನೋಡಿದರು. ಮತ್ತೆ—"ಈ ಮನೆಯಲ್ಲಿ ಕೆಲಸಕ್ಕೆ ಜನವಿಲ್ಲವೇ?" ಎಂದು ಪ್ರಶ್ನಿಸಿದರು

ನನ್ನ ತಾಳ್ಮೆ ಮುಗಿಯಿತು ನನ್ನ ಯತ್ನವು ಹಿಮಾಲಯವನ್ನು ಸೈಕಲಿನಲ್ಲಿ ಹತ್ತಿದಷ್ಟೆ ಸುಲಭವೆಂದು ತೋರಿತು "ಅಹುದು, ತಮ್ಮ ಪತ್ರ ಬಂದೊಡನೆ ಮೊನ್ನೆ, ಒಬ್ಬಳು ಹೆಂಗಸನ್ನು ತಂದಿದ್ದೇವೆ" ಎಂದು ಉತ್ತರ ವಿತ್ತು, ಇನ್ನು ಮಾವನವರೊಡನೆ, ಅವರ ವೈಖರಿಯಲ್ಲೆ ಮಾತಾಡ ಬೇಕೆಂದು ಶಪಥಮಾಡಿಕೊಂಡೆ

"ಯಾವ ಹೆಣ್ಣು?" ಮಾವನವರು ಪ್ರಶ್ನಿಸಿದರು (ಈಗ ಅವರಿಗೆ ಬಾಯಿ ತೆರೆದುಕೊಂಡು, ಸ್ವರದ ನರಗಳು ಸಡಲಿಸಿಕೊಂಡಿದ್ದುವು)

"ಆಫ್ರಿಕದಲ್ಲಿ ನಾಡಿಗಿಂತ ಕಾಡು ಹೆಚ್ಚೇ?" ಎಂದು ಕೇಳಿದೆ

"ವಿಪರೀತ ಒಂದು ಇಂಚು ನಾಡಾದರೆ, ಒಂದು ಮೈಲು ಕಾಡು ಆ ಜನ—ಅಂದರೆ ಹೆಣ್ಣು . " ಎಂದರು ಮಾವ

"ಅಹುದು,—ಆ ಜನ ಹೆಣ್ಣು, ಪ್ರಾಯ ೨೪ ಆನೆಗಳು ಹೆಚ್ಚು ಅಲ್ಲವೇ?"

"ಲೆಕ್ಕವೇ ಇಲ್ಲ. ಕಾಡುದಾರಿಯಾಗಿ ಹೋದರೆ, ಹಳ್ಳಿಯಲ್ಲಿ ದಾರಿ ನಾಯಿ ಸಿಕ್ಕಿದಂತೆ ಸಿಕ್ಕುತ್ತವೆ ಇಪ್ಪತ್ತನಾಲ್ಕು, ಅಲ್ಲವೆ? ಎಲ್ಲಿಯುವಳು?"

"ಮೊದಲು ತೆಂಕಲಾಗೆ ಇದ್ದವಳು ಪುಲವಕ್ಕೋಟೆ ಅಂತೆ ತಾಯಿ, ತಂದೆ, ಅಣ್ಣ, ಮಾವ, ಅಜ್ಜಿ, ಭಾವ, ತಂಗಿ, ಅಕ್ಕ—ಎಲ್ಲ ಸತ್ತರು. ಚಿರತೆಗಳೋ?''

"ಇಲ್ಲಿ ಬೆಕ್ಕುಗಳಿದ್ದಂತೆ ಒಂದು ಹಲ್ಲು ತಂದಿದ್ದೇನೆ ಮಗುವಿನ ಸೊಂಟಕ್ಕೆ ಹಾಕು—ಲಕ್ಷಣ! ಅವಳಿಗೆ ಮದುವೆ ?''

"ಆಗಲಿಲ್ಲ ವರಾನ್ವೇಷಣಕ್ಕೆ ಬೇರೆ ಜನವಿಲ್ಲ ಅವಳಿಗೆ ಪುರು ಸೊತ್ತಿಲ್ಲ ಒಂದು ಕಾಲು ವೋಂಟು, 'ಹಲ್ಕಿ' ಜಾತಿ!.. .."

"ಸುಮ್ಮಗಿರು''—ಮಾವ ಗುಡುಗಿಸಿದರು ''ನಾನೇನು ಕೇಳು ತ್ತಿದ್ದೇನೆ—ನೀನು ಏನು ಹೇಳುತ್ತಿದ್ದಿ?"

ನನಗೆ ಬೋಧೆಯೇ ಇಲ್ಲ "ತಾವು, ಆ ಕೆಲಸದವಳ .'' ಎಂದು ಬಾಯ್ತೆಗೆದೆ

''ಮುಚ್ಚು ಬಾಯಿ! ಸ್ತ್ರೀಯರ ವಿಷಯ ಮಾತಾಡಲು ನಾಚಿಕೆ ಯಾಗುವುದಿಲ್ಲವೇ? ಇಕೋ—ಇದನ್ನು ಓದು!'' ಎನ್ನುತ್ತ ತನ್ನ ಆಳವಾದ ಅಂಗಿಕಿಸೆಯೊಳಗೆ ನೀಳವಾದ ಕೈಯನ್ನಿಳಿಸಿ, ಅತ್ಯಂತ ಲಘುವಾದ ಒಂದು ಕಾಗದವನ್ನು ತೆಗೆದುಕೊಟ್ಟರು ಅದರಲ್ಲಿ ಹೀಗೆ ಬರೆದಿತ್ತು ''ಹೆಂಗಸೆಂಬ ಹೂವನ್ನು ಕಿತ್ತು ಬಿಸುಡಬೇಡ ಗಿಡದಲ್ಲಿ ಹುಟ್ಟಿ, ಗಿಡದಲ್ಲಿ ಅರಳಿ, ಗಿಡದಲ್ಲೆ ನಲಿದು ಲೋಕಕ್ಕೆ ಆನಂದವನ್ನೀಯಲಿ!" (ಕವಿ 'ಮದನ')

ಗಲಭೆಯೇನೆಂದು ಮಾರಿ ಒಳಗೋಡಿ ಬಂದಳು "ಮಗೂ! ಇವನ ವಿಷಯ ಜೋಕೆ! ಹೆಂಗುಸಿಗೆ ಮರ್ಯಾದೆ ಸಲಿಸುವಂತೆ ಹೇಳು!" ಎಂದು ಮಾವನವರು, ತನ್ನ ಸೊಸೆಯ ಆರೈಕೆಗೆ ನನ್ನನ್ನೊಪ್ಪಿಸಿ, ಸುತ್ತಲೂ ಯಾವುದನ್ನೋ ಹುಡುಕಿದಂತೆ ದೃಷ್ಟಿ ಬೀರಿ, ನಿರಾಶರಾಗಿ, ಕುರ್ಚಿಯಲ್ಲಿ ಒರಗಿ, ಕಣ್ಣುಮುಚ್ಚಿ, ಗಾಢನಿದ್ರೆಯಲ್ಲಿ ತೊಡಗಿದರು!

ನನಗೆ ಒಂದೂ ಅರ್ಥವಾಗಲಿಲ್ಲ ಮಾರಿ ಎಳೆದಳು-ನಾನು ಹೋದೆ

"ಮಾವನನ್ನು ನೋಯಿಸಿದಿರಾ?''

"ಇಲ್ಲ"

"ಯಾವ ಹೆಂಗಸಿಗೆ ಬಯ್ದಿರಿ?"

"ಬಯ್ಯಲೇ ಇಲ್ಲ ಆಫ್ರಿಕದ ಚಿರತೆಗಳ ಸಂಖ್ಯೆ ಕೇಳಿದೆ"

"ಹೇಗೂ ಇರಲಿ ನೀವು ಹೆಂಗುಸಿಗೆ ಮರ್ಯಾದೆ ಸಲಿಸಲು ಕಲಿಯು ಬೇಕೆಂಬುದು ನಿಜ ನನ್ನನ್ನು ಕಾಣುವ ತಮ್ಮ ಕ್ರಮ ಗೊತ್ತಿದೆಯಲ್ಲವೆ! ನೋಡಿ, ನನ್ನ ಮಾವ ಎಷ್ಟು ಜಾಣ! ತಮ್ಮ ಗುಣವನ್ನರಿತರು!" ಎಂದಳು.

"ಮಾವ—ಸೊಸೆ—ತಾಯಿ—ಎಲ್ಲ ಒಂದೇ ಜಾತಿ ನೀವು!" ಎಂದೆ.

"ನನ್ನ ಮಾವ ಬ್ರಹ್ಮಚಾರಿ ಅವರಿಗೆ ಹೆಂಗುಸರ ಸುದ್ದಿ ಎತ್ತಿದರೇ ಆಗುತಿದ್ದಿಲ್ಲ ಮದುವೆಮಾಡಬೇಕೆಂದು ಹೆಣ್ಣಿನ ಕಡೆಯುವರು ಬಂದಾಗ ಕಸರತ್ತಾಡಿ ಅವರನ್ನೋಡಿಸಿದ್ದರು" ಎಂದಳು

"ಅದರಿಂದಲೇ ಆಫ್ರಿಕಕ್ಕೆ ಹೋದರೇನೊ! ಇಲ್ಲದಿದ್ದರೆ ಬಂಗಾರ ದಂತಹ ದೇಶವನ್ನು ಬಿಡುವುದೆಂದರೆ !" ಎಂದೆ

"ನಿಮ್ಮ ನಂಜಿನ ನುಡಿ ಗೊತ್ತಿದೆಯಲ್ಲ. ಯಾವ ದಿನವಂತೆ ನೀವು ನನಗೆ—ನನ್ನ ತಾಯಿಗೆ—ನನ್ನ ಮಾವನಿಗೆ ಮರ್ಯಾದೆ ಸಲಿಸಿದ್ದು? ... ಹೋಗಲಿ, ಮಾವನವರ ಊಟವಾಗಿಲ್ಲ!" ಎನ್ನುತ್ತ ತನ್ನ ಮಾವನ ಉಪ ಚಾರಕ್ಕೆ ಹೊರಟಳು

ಬ್ರಹ್ಮಚಾರಿ ಮಾವನು ಊಟಮಾಡಿದನು; ಬ್ರಹ್ಮಚಾರಿ ಮಾವನು ನಿದ್ದೆಮಾಡಿದನು, ಬ್ರಹ್ಮಚಾರಿ ಮಾವನು ಎದ್ದನು; ಬ್ರಹ್ಮಚಾರಿ ಮಾವನು ಪುನಃ ಊಟಮಾಡಿದನು; ಬ್ರಹ್ಮಚಾರಿ ಮಾವನು ಪುನಃ ನಿದ್ದೆಮಾಡಿದನು, ಬ್ರಹ್ಮಚಾರಿ ಮಾವನು ಪುನಃ ಎದ್ದನು, ಬ್ರಹ್ಮಚಾರಿ ಮಾವನು ಹೆಂಗು ಸೆಂಬ ಜೀವಿಯನ್ನು ಮಾತ್ರ ಕಣ್ಣೆತ್ತಿ ನೋಡಲಿಲ್ಲ!

× × × ×

ನಾಲ್ಕನೇ ದಿನ ಬೆಳಿಗ್ಗೆ ಮಾಿಯು ಬಲವಾಗಿ ನನ್ನನ್ನಲುಗಿಸಿ, ಎಚ್ಚರಿಸಿ, "ಇದನ್ನು ನೋಡಿರಿ!" ಎನ್ನುತ್ತ ಕಣ್ಣೀರಿಳಿಸಿದಳು

ಪತ್ರ ಓದಿದೆ "ಈ ಮನೆಯಲ್ಲಿ ಯಾರೋ ಕಿತ್ತು ಬಿಸುಡಿದ ಹೂವನ್ನು ಹೆಕ್ಕಿದ್ದೇನೆ —ನಿನ್ನ ಮಾವ"

ಸರಿ! ಒಂದೂವರೆಕಾಲು ಸಮಿತ ಸಿಕ್ಕಿದ ಆ 'ಹೂ'ವನ್ನು ಆಫ್ರಿಕದ ಮಾವನು ಹೆಕ್ಕಿ, ಪುನಃ ಆಫ್ರಿಕಕ್ಕೋ, ಮತ್ತೆಲ್ಲಿಗೋ ಹೋಗಿದ್ದನು

"ಅಳಬೇಡ! ಅಂತಹ ಮಾವಂದಿರಿದ್ದರೆ ನನ್ನ ಜೀವನವು ಸ್ಮಶಾನದಂತಾಗುತ್ತಿತ್ತು!" ಎಂದೆ

"ಊರಿಗೆ ತಿಳಿದರೆ ನಾನು ಹೇಗೆ ಮುಖ ತೋರಿಸಲಿ!" ಎಂದು ಪುನಃ ಅತ್ತಳು.

"ಊರಿಗೆ ತಿಳಿಸಬೇಡ!" ಎಂದೆ

"ನನ್ನ ಮಾವನ ವಿಷಯ ತಮ್ಮ ಅಭಿಪ್ರಾಯವೇನೋ!" ಎಂದು ಪುನಃ ಬಿಕ್ಕಿಬಿಕ್ಕಿ ಅತ್ತಳು

"ಒಳ್ಳೇದಿದೆ ನ್ಯಾಯವನ್ನೆ ಮಾಡಿದನು ಅನ್ಯಾಯಮಾಡುವನೆನ್ನುವ ಬೀದಿಪೋರನಿಂದ ಹಿಡಿದು, ನ್ಯಾಯಕೊಡುವವನೆನ್ನುವ ಡಿಸ್ಟ್ರಿಕ್ಟ್ ಜಡ್ಜಿಗಳ ತನಕ ಹಾಗೆ ಮಾಡುವುದುಂಟು" ಎಂದೆ

"ಕಾಲು—ಎರಡೂ ಇಲ್ಲ!" ಎಂದಳು

"ನಾವೇನು ಮಾಡಲಾಗುತ್ತದೆ? ಪರಮಾತ್ಮನು ಕೊಡುವಾಗ ಅಷ್ಟೆ ಕೊಟ್ಟನು!" ಎಂದೆ.

"ಅಡಿಗೆಯವಳು" ಎಂದು ದುಃಖಿಸಿದಳು

"ಚಿಂತಿಸಬೇಡ! ಈಗ ಭಡ್ತಿಯಾಯಿತು" ಎಂದೆ!

× × × ×

ಮರುವರುಷ ಬೊಂಬಾಯಿಯಿಂದ ಒಂದು ಕಾಗದ ಬಂತು, ಮೀರಿಯ ಮಾವನದು, ಆಫ್ರಿಕದ ಮಾವನ ನವವಧುವು ಹೆತ್ತು ಮರಿಯಾನೆ (ಗಂಡು) ಅವತಾರ ತಾಳಿದೆಯೆಂದು ಕೇಳಿದೆವು

"ಬ್ರಹ್ಮಚಾರಿಗಳನ್ನು ಎಷ್ಟು ಕಾಲ ನಂಬಬಾರದು?" ಎಂದು ಮೀರಿ ಕೇಳಿದಳು

"ವಿವಾಹವಾಗುವ ತನಕ!" ಎಂದೆ

ಒಪ್ಪಿದಳು

---

## ೭. ಮೀರೆಯೂ ಮುನ್ಸಿಫರೂ

"ಇನ್ನು ಮೂರು ದಿನಗಳಲ್ಲಿ ಕಾಶಿ, ಹರಿದ್ವಾರ, ಗಯಾ, ಪ್ರಯಾಗ, ಮೊದಲಾದ ಮಹಾ ಮಹಾ ಕ್ಷೇತ್ರಗಳಿಗೆ ಹೊರಡಬೇಕಾದೀತು!'' ಎಂದು ಮೀರೆ ಹೇಳಿದಳು

''ಅಷ್ಟು ದೊಡ್ಡ ಪಾಪವನ್ನು ನಾವು ಮಾಡಿದ್ದೇವೆಯೇ?'' ಎಂದು ನಾನು ಕೇಳಿದೆ.

''ಅಪ್ಪ ಬರೆದಿದ್ದಾನೆ, ಅಮ್ಮನೊಂದಿಗೆ ಹೊರಡುವನಂತೆ'' ಎಂದಳು.

''ನಿನ್ನ ಅಪ್ಪ ಮತ್ತು ಅಮ್ಮನ ಪ್ರಾಯವು ಯಾತ್ರೆಗಳಿಗೆ ಹೇಳಿದ್ದೇ. ನಾವೇನೂ ಅವಸರದಲ್ಲಿಲ್ಲ'' ಎಂದು ನಾನಂದೆ

''ಅಪ್ಪನ ಖರ್ಚಿನಲ್ಲಿ ಹೊರಡುವುದಿದ್ದರೆ ಏಕಂತೆ ಆಕ್ಷೇಪ?'' ಎಂದು ಮೀರೆ ಕೇಳಿದಳು

"ಮಾವನ ಖರ್ಚಿನಲ್ಲಿ ಕಾಶಿ, ಗಯಾ ಮೊದಲಾದ ಯಾತ್ರೆ ಮಾಡುತ್ತಿರುವುದು ಪುರುಷಲಕ್ಷಣವಲ್ಲ''—ಎಂದು ನಾನು ಮೀರೆಗೆ ಖಚಿತಪಡಿಸಲೆತ್ನಿಸಿದೆ.

ಇದಕ್ಕರ್ಥವಿಲ್ಲವೆಂದು ಮೀರೆ ಹೇಳಿದಳು ಆಕೆಯ ಮದುವೆಯಾಗುವುದಿದ್ದರೆ, ಅಳಿಯನನ್ನು ಹಿಡಕೊಂಡು ಕೆಲವು ಕ್ಷೇತ್ರಗಳನ್ನು ತಿರುಗುವೆನೆಂದು ಅಮ್ಮನು ಹರಕೆ ಹೇಳಿಕೊಂಡ ಪ್ರಕಾರ ಈಗ ಯಾತ್ರೆಗೆ ಹೊರಡುವ ನಿರ್ಧಾರವಾಗಿದೆ ಎಂದಳು, ಇದರಿಂದ ಪುರುಷನ ಮಾನದಲ್ಲಿ ಎಳ್ಳಷ್ಟೂ ಕುಂದು ಬಾರದೆಂದಳು

ಅಳಿಯನ ಖರ್ಚಿನಲ್ಲೇ ಯಾತ್ರೆಮಾಡುವೆನೆಂದು ಅವಳ ತಾಯಿ ಹೇಳಿಕೊಳ್ಳಲಿಲ್ಲವೆಂದು ನನಗೆ ಸಂತೋಷವಾಯಿತೆಂದೆ 'ಸ್ತ್ರೀವಿತ್ತಂ ಅಧಮಾಧಮಂ' ಎಂಬ ನೀತಿ ವಾಕ್ಯವು ನೆನಪಿಗೆ ಬಂದು ಪುರುಷಲಕ್ಷಣದ ಮಾತೆತ್ತಿದೆನೆಂದು ಮೀರೆಗೆ ವಿವರಿಸಿ, ನನಗೆ ಯಾವ ಕಾಲಕ್ಕೂ ಎಷ್ಟು ರಜೆಯಾದರೂ ಸಿಗುವುದೆಂದೆ

''ಮೂರು ತಿಂಗಳ ರಜೆ ಸಾಕು'' ಎಂದಳು ಮೀರೆ.

"ಮೂರು ತಿಂಗಳು! ಆ ತನಕ ನಮ್ಮ ಮನೆ ಮುಚ್ಚಿಡೋದೆ?" ಎಂದು ಕೇಳಿದೆ.

"ಇಲ್ಲ ಉಪಾಯ ಇದೆ" ಎಂದಳು

"ಉಪಾಯ ಇದೆ" ಎಂದರೆ ಮುಚ್ಚದೆ ಇರೋದು! "ಹೇಗೆ ಉಪಾಯ?" ಎಂದು ಕೇಳಿದೆ

"ಕಡಪಾದಿಂದ ಇಲ್ಲಿಗೆ ವರ್ಗವಾಗಿ ಬಂದ ಹೊಸ ಮುನ್ಸೀಫರಂತೆ, ಮನೆ ಹುಡುಕುವರೆಂದು ನೆರೆಕರೆ ಶೀನು ಹೇಳಿದನು ನಮ್ಮ ಮನೆ ಮೂರು ತಿಂಗಳು ಬಾಡಿಗೆಗೆ ದೊರೆಯುವುದು ಎಂದಿದ್ದೇನೆ ಅವರಿಗೆ ಈ ದಿನವೇ ಬಂದು ನೋಡಿಹೋಗಲು ಹೇಳಿದ್ದೇನೆ" ಎಂದಳು

ನನಗೆ ಉಸಿರು ಕಟ್ಟಿತು ನಾವು ಮೂರು ತಿಂಗಳು ಇಲ್ಲಿಲ್ಲವೆಂದು, ನಮ್ಮ ಸಾಮಾನುಗಳನ್ನೆಲ್ಲ ಒಂದು ಕೋಣೆಯಲ್ಲಿಟ್ಟು, ಮನೆಯನ್ನು ಮುನ್ಸೀಫರಿಗೆ ಕೊಡುವುದೇ? ಮಿಾರೆ ಇಷ್ಟು ದೊಡ್ಡ ವ್ಯಾಪಾರಿಯಾದಳಲ್ಲ! "ಮಿಾರಾ, ಫೇರಿಯವರಿಗೆ ಹಳೆ ಸಾಮಾನು ವಿಕ್ರಯಿಸುವುದೂ ಇದ್ದ ಮನೆಯನ್ನು ಎರಡು ತಿಂಗಳು ಬಿಡುವಾಗ ಬಾಡಿಗೆಗೆ ಕೊಡುವುದೂ ನನಗೊಪ್ಪುವುದಿಲ್ಲ" ಎಂದೆ

"ನಿಮ್ಮ ತತ್ವಗಳು ನನಗೊಪ್ಪುವುದಿಲ್ಲ ನಾವಿಲ್ಲದಾಗ, ಹೆಗ್ಗಣಗಳು ಮನೆಯನ್ನು ಆಳುವುದಕ್ಕಿಂತ ಚೆನ್ನಾಗಿ ಮುನ್ಸೀಫರೂ ಅವರ ಹೆಂಡತಿಯೂ ಆಳಬಲ್ಲರು, ದುಡ್ಡೂ ಸಿಗುತ್ತದೆ" ಎಂದಳು

"ಮತ್ತೆ ಹೆಗ್ಗಣಗಳು ಬೇರೆ ಬಂದರೂ, ಮುನ್ಸೀಫರು ಅವುಗಳನ್ನು ವಿಚಾರಣೆಗೊಳಪಡಿಸಿ ಡಿಕ್ರಿ ಕೊಡುತ್ತಾರೆ" ಎಂದೆ

"ತಮಾಷೆ ಬೇಡ. ರಜೆಗೆ ಈ ದಿನವೇ ಬರೆದುಕೊಳ್ಳಿರಿ ಮತ್ತೆ ಸಾಯಂಕಾಲ ಐದು ಘಂಟೆಗೆ ಮುನ್ಸೀಫರೂ ಅವರ ಹೆಂಡತಿಯೂ ಬರುತ್ತಾರೆ ಅವರು ಬರುವಾಗ ನಿಂತು ಅವರಿಗೆ ಮನೆ, ಹಿತ್ತಿಲು, ಬಾವಿ, ಹಟ್ಟಿ—ಎಲ್ಲವನ್ನೂ ತೋರಿಸಿ, ಸ್ವಲ್ಪ ಹೊಗಳಿ ಮಾತಾಡಿರಿ. ಮುನ್ಸೀಫರ ಪರಿಚಯವಾದರೆ, ಕೆಟ್ಟುದಿಲ್ಲ!" ಎಂದಳು

"ಫೇರಿಯವರಿಗೆ ಮನೆಯ ಹೆಂಗುಸರು ಇಝಿಚೆಯರ್, ಕಪಾಟು, ಮೇಜು, ಸೌಟು, ಇವುಗಳನ್ನಲ್ಲದೆ ಹಳೇ ಕೆಂಪಿನ ಬೆಂಡೋಲೆ, ರೇಶ್ಮೆ,

ಸೀರೆ, ಲಿಯೊ ದಿ ಲಾಯನ್ ಎಂಬ ಗ್ರಾಮಸಿಂಹ, ಮೂವನ ಹಳೆ ಕಿಸೆ ಗಡಿಯಾರ ಮತ್ತು ಬೆಳ್ಳಿಯ ತಲೆಕಟ್ಟಿನ ಬೆತ್ತ, ಹುಡಿಬುರುಡೆ—ಇವೇ ಮೊದಲಾದುವನ್ನು ರೂಪಾಯಿಗೆ ಕಾಲಾಣೆ ದರದಲ್ಲಿ ಮಾರಾಟಮಾಡು ತ್ತಾರೆ ಅವರನ್ನೆಲ್ಲ ನೀನು ಮೆಚ್ಚುವಿ ಅಂಥವರು ಹಲವರು ನಿನಗೆ ಗೆಳತಿಯರಿದ್ದಾರೆ ಈ ಮನೆಯನ್ನೂ ಈಗ ಬಾಡಿಗೆಗೆ ಕೊಡುವ ಪ್ರೇರಣೆ ಆ ಗೆಳತಿಯರಿಂದ ಬಂದಿದೆಯೆಂದು ಭಾವಿಸಿ ಸುಮ್ಮಗಾಗುವವನಿದ್ದೇನೆ ಇದಕ್ಕಾಗಿ ನನ್ನ ಚಿಕ್ಕ ನಿಷೇಧವನ್ನು ನನ್ನೊಳಗೇ ವ್ಯಕ್ತಪಡಿಸಿ, ರರಾವು ಮಾಡಿ, ಸಾಯಂಕಾಲ ಕಡಮಾ ಮುನ್ಸೀಫರನ್ನೂ ಅವರ ಅರ್ಧಾಂಗಿ ಯನ್ನೂ ಎದುರ್ಗೊಂಡು ಸತ್ಕರಿಸಲು ಸಿದ್ಧನಾಗುವೆನೆಂದು ಆಶ್ವಾಸನೆ ಕೊಡುವ ನಿನ್ನ ದುರ್ಭಾಗೀ ಗಂಡ"—ಎಂದು ಒಂದು ಪತ್ರ ಬರೆದೋ ಪಾದಿ ಅವಳಿಗೆ ಹೇಳಿ, ಮನೆಯನ್ನು ಮುನ್ಸೀಫರೂ ಅವರ ಹೆಂಡತಿಯೂ ಮೂರು ತಿಂಗಳನಂತರ ನಮಗೆ ಬಿಟ್ಟುಕೊಡಬೆ, ನಾವು ಬಂದಾಗ ಯಾವು ದಾದರೂ ಒಂದು ಕಾನೂನಿನಂತೆ ತಮ್ಮದೇ ಎಂದು ನಿರ್ಣಯಿಸಿ—ನಮಗೆ 'ಬೇಬಿ ವರ್ಸಸ್ ಬೂಬಿ' ಎಂಬ ವ್ಯಾಜ್ಯವನ್ನು ಉದಾಹರಣಾರ್ಥ ಹೇಳಿ ದರೆ ದೇವರೇ ಗತಿ—ಮುನ್ಸೀಫರ ಮೇಲೆ ವ್ಯಾಜ್ಯಮಾಡಬಹುದೇ' ಎಂದೆ

ಮೀರೆ ಹೆದರದಿರಿ ಎಂದಳು ನಾವು ಮರಳಿ ಬರುವ ನಾಲ್ಕು ದಿನ ಗಳ ಮುಂಚಿತವಾಗಿಯೇ ನಮಗೆ ಮನೆ ಬಿಟ್ಟುಕೊಡುವ ಶರ್ತದ ಪತ್ರ ಮಾಡಿಸಬೇಕೆಂದಳು ಮುನ್ಸೀಫರು 'ಬೇಬಿ ವರ್ಸಸ್ ಬೂಬಿ' ವ್ಯಾಜ್ಯ ವನ್ನು ಹೇಳಿದರೆ ನಾವು 'ಮುನ್ಸೀಫ್ ವರ್ಸಸ್ ಮೇನ್‌ಶಿಪ್' ಎನ್ನ ಬಹುದು ಎಂದಳು ಮನೆ ಬಿಟ್ಟುಕೊಡದಿದ್ದರೆ ಅವರನ್ನು ಮೊದಲು ಕರ ಕೌಶಲ್ಯದಿಂದ ವರ್ಗಾಯಿಸಿ ನಂತರ ವ್ಯಾಜ್ಯವೆಂದಳು ಮುನ್ಸೀಫರು ಒಳ್ಳೆಯವರೆಂದು ಕೊನೆಯದಾಗಿ ನುಡಿದು, ಅವರು ಬರುತ್ತಲೇ ಅವ ರೊಡನೆ ನಾನು ಮೆತ್ತಗೆ ಮಾತಾಡಿ, ಮನೆಯನ್ನು ಚೆನ್ನಾಗಿ ಹೊಗಳ ಬೇಕೆಂದಳು

ಮುನ್ಸೀಫರು ಬಂದರು ಕಡಪಾದಲ್ಲಿ ಚೆನ್ನಾಗಿ ಬೆಂದ ಕಾರಣ ಅಲ್ಲಿಯ ಕಲ್ಲಿನಂತೇ ಕರ್ರಗಿದ್ದರು. ಅವರಿಗಿಂತ ಎರಡುಪಾಲಷ್ಟು ಬೆಳೆದ ಅವರ ಸಹಧರ್ಮಿಣಿಯೂ ಬಳಿಯಲ್ಲಿದ್ದಳು ಸಹಧರ್ಮಿಣಿಯು ಕುತ್ತಿಗೆಯ

ಲ್ಲೇನೂ ಸರ-ಗಿರ ಧರಿಸಿಲ್ಲವೇನೆಂದು ನೋಡಿದೆ ಕುತ್ತಿಗೆಯ ಮಾಂಸದಲ್ಲಿ ಅವು ಹುದುಗಿಹೋಗಿದ್ದುವೆಂದು ಪ್ರಕಟವಾಯಿತು ಸಹಧರ್ಮಿಣಿಯು ಅತ್ತಿತ್ತ ಕುತ್ತಿಗೆಯನ್ನು ತಿರುಗಿಸಲಾಗದೆ ಮೆಲ್ಲನೆ ಮರದ ಆನೆಯಂತೆ ಇಡೀ ದೇಹವನ್ನು ತಿರುಗಿಸುತಿದ್ದಳು ಅವಳ ಪಾರ್ಶ್ವದಲ್ಲಿ ನಿಂತು ನೋಡಿದರೆ ಅವಳ ಗಂಡನು ಅರ್ಧಕ್ಕರ್ಧವೂ, ಮುಂಬದಿ ಯಾ ಹಿಂಬದಿಯಿಂದ ನಿಂತು ನೋಡಿದರೆ ಪೂರ್ಣವೂ ಮಾಯವಾಗಿ ಇರುತ್ತಿದ್ದನು

"ಓಃ! ಎಷ್ಟು ಮನೋಹರ ಮನೆ!" ಎಂದು ಮುನ್ಸೀಫರನ್ನುತ್ತ, ಬೆತ್ತವನ್ನು ಗಿರ್ರನೆ ತಿರುಗಿಸಿದರು.

"ತಂಪು!" ಎಂದಳು ಸಹಧರ್ಮಿಣಿ

"ಐಸಿನಂತೆ!" ಎಂದರು ಮುನ್ಸೀಫರು

"ಹುಚ್ಚು! ಕೇವಲ ತಂಪು!" ಎಂದು ತಿದ್ದಿದಳು ಸಹಧರ್ಮಿಣಿ.

"ನಿಜ!" ಎಂದೊಪ್ಪಿದರು ಮುನ್ಸೀಫರು.

ಮೊರೆ ಅಲ್ಲಿರಲಿಲ್ಲ ನಾನು ಖಂಡಿತ ಮನಸ್ಸಿನಿಂದ—"ಸೆಕೆಗಾಲದಲ್ಲಿ ಇಲ್ಲಿ ಸೆಖೆ ತಡೆಯಲಾಗುವುದಿಲ್ಲ. ಸೂರ್ಯನು ಇಲ್ಲೇ ಮೂಡಿ ಹೊರಡುತ್ತಾನೋ ಎಂಬಷ್ಟು ಬೆಂಕಿ!" ಎಂದೆ.

"ಸೆಖೆಗಾಲದಲ್ಲಿ ತಂಪು ಇರುತ್ತಿದ್ದರೆ ಅದಕ್ಕೆ ಸೆಖೆಗಾಲ ಎನ್ನುವರೇ?" ಎಂದಳು ಸಹಧರ್ಮಿಣಿ. "ಋತುಧರ್ಮದಂತೆ ನಡೆಯಬೇಕು" ಎಂದರು ಮುನ್ಸೀಫರು

ತೋಟದ ಕಡೆಗೆ ಹೋದೆವು. "ಎಷ್ಟು ಮನೋಹರ ತೋಟ!" ಎಂದರು ಸಹಧರ್ಮಿಣಿ "ಗಿಡಗಳ ಸೊಬಗನ್ನು ನಾನು ಇಲ್ಲಿ ಕಂಡಂತೆ ಮತ್ತೆಲ್ಲಿಯೂ ಕಂಡಿಲ್ಲ" ಎಂದರು ಮುನ್ಸೀಫರು.

"ಒಂದೇ ಒಂದು ಹೂ ಹುಟ್ಟುವುದಿಲ್ಲ, ಕೆಟ್ಟ ಮಣ್ಣು!" ಎಂದೆ.

"ನನಗೆ ಹೂಗಳಾದರೆ ರಗಳೆ ಕಾಣುತ್ತಿದೆ. ತುಂಬ ಎಲೆ—ತುಂಬ ಗಿಡಗಳು—ಒಳ್ಳೇ ಗಾಳಿ" ಎಂದಳು ಸಹಧರ್ಮಿಣಿ. "ನಿಜ!" ಎಂದನು ಗಂಡ.

ಬಾವಿ ಕಡೆಗೆ ಹೋದೆವು. "ನಮ್ಮ ಬಾವಿ ಎಂದರೆ, ಮೇಲಿಂದ ಕೆಳಗಿಣಿಕಿದರೆ ನೀರೇ ಕಾಣದು, ಇಪ್ಪತ್ತು ಮಾರು ಹಗ್ಗ ಇಳಿಸಿದರೂ ಕೊಡವು ನೀರಿಗೆಟಕದು" ಎಂದೆ

"ಅಹ! ಹಾಗಾದರೆ ಎಷ್ಟು ಶುದ್ಧವಾಗಿ–ಸ್ಫಟಿಕದಂತಿರಬೇಕು ನೀರು!" ಎಂದು, ಸಹಧರ್ಮಿಣಿ ತನ್ನ ಪತಿಯ ಕಡೆಗೆ ದೃಷ್ಟಿ ತಿರುಗಿಸಿದಳು.

"ಅದರಲ್ಲಿ ಕೆಸರು ಬರಲು ಕಾರಣವೇ ಇಲ್ಲ" ಎಂದು ಮುನ್ಸೀಫರು ತಮ್ಮ ಅಭಿಪ್ರಾಯವಿತ್ತರು

ಮನೆಯಾಚೆಯ ಹಿತ್ತಿಲಿನಲ್ಲಿ ಅನೇಕ ಬಾಲಕರು ಕಲ್ಲು ಬಿಸುಡಿ ಆನಂದಪಡುತಿದ್ದರು "ಚಿಕ್ಕ ಮಕ್ಕಳ ತಂಟೆ ಇಲ್ಲಿ ವಿಪರೀತ! ದಿನವಿಡೀ ಉಪಟಳ ಕೊಡುತಿದ್ದಾವೆ ಮನೆಯೊಳಗೂ ಬಂದು ತಂಟೆ ಮಾಡೋದು ತಪ್ಪೋದಿಲ್ಲ"—ಎಂದು ನಾನು, ಮುನ್ಸೀಫ ದಂಪತಿಗಳನ್ನು, ಈ ಮನೆಯ ಮೇಲೆ ತಿರಸ್ಕಾರ ಹುಟ್ಟಲು ನಾಲ್ಕನೇ ಯತ್ನ ಮಾಡಿದೆ

ಆದರೆ, ಅದನ್ನು ಕೇಳಿಯೂ ಇಬ್ಬರ ಮುಖಗಳೂ ಸಂತೋಷದಿಂದ ಅರಳಿದುವು "ಇಲ್ಲಿ ಸುತ್ತು ಮುತ್ತಲೂ ಮಕ್ಕಳಿರುವರೇ? ಮನೆಯೊಳಗೂ ಬರುವುವೇ? ಎಷ್ಟು ಚಲೋದಾಯಿತು! ಮಕ್ಕಳೆಂದರೆ ನಮಗೆ ಪಂಚಪ್ರಾಣ" ಎಂದರು, ಇಬ್ಬರೂ ಏಕ ಸ್ವರದಲ್ಲಿ!

ಅದನ್ನು ಕೇಳಿ ನಾನು ಮಾತ್ರ ಕಂಗಾಲಾದೆ. ಮನೆಯನ್ನವರು ಒಪ್ಪಬಾರದೆಂದು ಎಷ್ಟು ಯತ್ನಿಸಿದರೂ ಇವರು ಕೇಳಲೊಲ್ಲರೇಕೆ!

"ಅಡುಗೆ ಕೋಣೆಯು, ಬಾವಿಯಿಂದ ಬಲು ದೂರ!" ಎಂದೆ ನಾನು.

"ಅದು ಒಳ್ಳೆಯದೇ ಬಾವಿಯ ಬಳಿಯೇ ಅಡುಗೆ ಕೋಣೆಯಿದ್ದರೆ ಕೆಸರಾಗುವುದೂ ಬೇಗ!" ಎಂದಳು ಮುನ್ಸೀಫರ ಅರ್ಧಾಂಗಿ

ನಾನವರನ್ನು ಕೊಠಡಿಯೊಳಗೊಯ್ದು, "ಒಂದು ಕುರ್ಚಿಯ ಕೈಯೂ ಮೇಜಿನ ಕಾಲೂ ಅಲುಗಾಡುತ್ತಿವೆ!" ಎಂದೆ

"ಚಿಂತೆಯಿಲ್ಲ ನಮ್ಮವರಿಗೆ, ಕೋರ್ಟಿನಿಂದ ಮನೆಗೆ ಬರುತ್ತಲೇ ಅಂತಹ ಸಣ್ಣ ಪುಟ್ಟ ರಿಪೇರಿ ಕೆಲಸ ಮಾಡುವುದೆಂದರೆ ಬಲು ಇಷ್ಟ!" ಎಂದಳು ಮುನ್ಸೀಫರ ಹೆಂಡತಿ

ನಾನು ಮತ್ತೊಂದು ಕೊಠಡಿಯ ಬಾಗಿಲು ತೆರೆದು, ಹೊರಗೆ ಬೆರಳು ತೋರಿಸಿ, "ನೆರೆಮನೆಯ ಸೀತಾರಾಮಯ್ಯನವರು ಗಂಟೆಗಂಟೆಗೆ ಬಂದು, ಮೂರ್ತಿ ಪೂಜೆ ವಿಷಯ ಚರ್ಚೆ ಮಾಡುವುದು ವಿಶೇಷ. ಅದನ್ನು ಕೇಳಿ ಕೇಳಿ ಕಿವಿ ಕಿವುಡಾಯಿತು" ಎಂದೆ

ಇದನ್ನಂತು ಕೇಳುತ್ತಲೇ, ಮುನ್ಸೀಫರ ಅರ್ಧಾಂಗಿಯು ಗಂಡನ ಕಡೆಗೆ ಹೊರಳಿ ನೋಡಿ ಮುಗುಳ್ನಗೆ ನಕ್ಕಳು "ನಮ್ಮ ಯಜಮಾನರಿಗೆ ಈ ವಿಷಯದಲ್ಲಿ ತರ್ಕಮಾಡಿ ಕುಳ್ಳಿರುವುದೆಂದರಾಯಿತು. ಯಾರೂ ಸಿಗದಿದ್ದರೆ ಕೊನೆಗೆ ನನ್ನ ಬಳಿಗೇ ಬಂದು, 'ಮೂರ್ತಿ ಪೂಜೆಯ ವಿಷಯ ನಿನ್ನ ಅಭಿಪ್ರಾಯವೇನು' ಎಂದು ಪ್ರಶ್ನಿಸಿ ನನ್ನನ್ನು ತರ್ಕಕ್ಕೆ ಸೆಳೆಯುತ್ತಾರೆ" ಎಂದಳಾಕೆ ಮುನ್ಸೀಫರು ಅನುಮೋದನಾ ಸೂಚಕವಾಗಿ ತಲೆಯಲ್ಲಾಡಿಸಿದರು

ಇದನ್ನೆಲ್ಲ ಕೇಳಿ ನನ್ನ ತಲೆ ಕರಡಾಯಿತು. 'ಆಸುಪಾಸಿನ ಚರಂಡಿಗಳ ವಾಸನೆ ಸಹಿಸಲಿಕ್ಕಾಗುವುದಿಲ್ಲ'—ಎಂದು ಹೇಳಬೇಕೆಂದಿದ್ದೆ ಆದರೆ, ಮುನ್ಸೀಫರೂ ಅವರ ಹೆಂಡತಿಯೂ 'ಈ ದುರ್ವಾಸನೆಯು ದೇಹಕ್ಕೂ ಘ್ರಾಣೇಂದ್ರಿಯಕ್ಕೂ ಒಳ್ಳೆಯದು' ಎಂದು ಹೇಳದಿರಲಾರರೆಂದು ಮನಸ್ಸಿಗೆ ತೋರಿತು.

ಇಷ್ಟರಲ್ಲಿ ಮೀರೆ ಅಲ್ಲಿಗೆ ಬಂದಳು ನಮ್ಮ ಮನೆ ಮತ್ತು ತೋಟ ನೋಡಿ ಮುನ್ಸೀಫರು ಹರುಷಗೊಂಡರೆಂದು ತಿಳಿದು ಆವಳಿಗೆ ಮನಸ್ಸಿಗೆ ಬಹು ಸಂತೋಷವಾಯಿತು ಆ ಸಂತೋಷದ ಆವೇಶದಲ್ಲಿ—

"ರೈಲ್ವೇ ಸ್ಟೇಷನೂ ಇಲ್ಲಿಗೆ ಬಹಳ ಸಮೀಪವಿದೆ ಎಂದು ಇವರು ನಿಮಗೆ ಹೇಳಿಲ್ಲವೇ?" ಎಂದು ಮೀರೆ, ಮುನ್ಸೀಫರ ಹೆಂಡತಿಯೊಡನೆ ಕೇಳಿದಳು.

ಇದನ್ನು ಕೇಳಿದ್ದೇ ತಡ,—ಮುನ್ಸೀಫರ ಮತ್ತು ಅವರ ಸಹಧರ್ಮಿಣಿಯ ಮುಖಗಳು ಒಂದೇ ಬಾರಿಗೆ ಜೋಲು ಬಿದ್ದುವು. "ಹಾಗಾದರೆ, ಈ ಮನೆ ನಮಗೆ ಬೇಡ"—ಅಂದರವರು, ಏಕಕಂಠದಿಂದ!

ಮೀರೆಗೆ ಆಶ್ಚರ್ಯವಾಯಿತು. "ಏಕೆ?" ಎಂದವಳ ಪ್ರಶ್ನೆ.

"ರೈಲ್ವೆ ಬಂಡಿಗಳು ಅತ್ತಿತ್ತ ಓಡುವಾಗ, ಅವುಗಳ ಶಬ್ದಕ್ಕೂ ಬಿಗಿಲುಗಳ ಕೂಗಿಗೂ ನಮ್ಮವರ ಮೈಯ ನರಗಳೆಲ್ಲ ಹುಡಿ ಹುಡಿಯಾಗಿ ಹೋಗುತ್ತವೆ. ಅವರು ಹೆಚ್ಚಾಗಿ ಮೋಟಾರಲ್ಲೆ ಪ್ರಯಾಣಮಾಡುತ್ತಾರೆ. ನಿನ್ನ ಗಂಡನು ಈ ವರೆಗೆ ಈ ಮನೆಯು ಎಷ್ಟು ಒಳ್ಳೆಯದೆಂದು ನಮಗೆ ವಿವರಿಸಿದ್ದನೋ ಅಷ್ಟೇ ಕೆಟ್ಟದೆಂದು ನೀನೀಗ ಒಂದೇ ಮಾತಿನಲ್ಲಿ ಹೇಳಿದಂತಾ

ಯಿತು''—ಎಂದು ಮುನ್ಸೀಫರ ಹೆಂಡತಿಯು ಹೇಳಿ, ನನ್ನ ಕಡೆಗೆ ದುರ ದುರನೆ (ಬಹುಶಃ ನಾನು ರೈಲ್ವೆ ಬಂಡಿಯ ವಿಷಯವನ್ನು ರಹಸ್ಯವಾಗಿಟ್ಟೆ ನೆಂದು) ನೋಡಿ, ತನ್ನ ಒಡೆಯನ ಕೈಯನ್ನು ಸೆಳೆದು ಹಿಡಿದು, ಸಟಕ್ಕನೆ ಹೊರಟೇ ಹೋದಳು!

× × × ×

ಮೂರು ತಿಂಗಳ ವರೆಗೆ ಮನೆಯು ಬರಿದಾಗಿಯೇ ಉಳಿಯಿತು. ನಾವು ಹಿಂದಿರುಗಿದಾಗ, ಹೆಗ್ಗಣಗಳು ಅದನ್ನು ಹಾಳುಗೆಡವಿರಲಿಲ್ಲ

---

# ೭. ಮುದ್ದು ಹೆಗ್ಗಣ

ಮೀರೆ ಅಪರೂಪವಾಗಿ ವೀಳಯ ಜಗಿಯುತಿದ್ದಳು ನಾನು ಒಂದು ಕುರ್ಚಿಯಲ್ಲಿ ಸಮಾಧಿಸ್ಥನಾಗಿ ಚಾಲತಿ ತಿಂಗಳ ಆಯ-ವ್ಯಯದ ಪಟ್ಟಿ ಯನ್ನು ಸರಿದೂಗಬೇಕೆಂದು ಅರ್ಥಶಾಸ್ತ್ರ ವಿಶಾರದನಾದ ಪರಮಾತ್ಮನಿಗೆ ಅಪ್ಪಣೆಮಾಡಿದ್ದೆ

ಸುಪ್ರಸನ್ನನು ನನ್ನೆದುರು ಶಾಯಿ ಚೆಲ್ಲಿದನು. "ಅಯ್ಯೋ ಹೋಯ್ತು ಶಾಯಿ!" ಎಂದೆ. ಹಾಗೆಲ್ಲ ನಷ್ಟವಾದರೆ, ಬಜೇಟನ್ನು ಸರಿಮಾಡಲು ಪರಮಾತ್ಮನು ಒಪ್ಪಲಾರನೆಂದು ನನಗೆ ಗೊತ್ತು

"ಶಾಯಿ ಹೋದರೆ ಅಷ್ಟು ಬಿರುಸಾಗಿ ಹೋಯಿತೆನ್ನಬೇಕೆ? ಹಾಗೆ ಹೇಳಿದ ಕೂಡಲೇ ಹೋದದ್ದು ಬಂತೆ? ಸುಪ್ರು ಹೇಗೆ ಕೂಗಿದ ನೋಡಿ!" ಎಂದು ಮೀರೆ ಸಿಡುಕಿನಿಂದ ಹೇಳಿದಳು ಮೇಜಿನ ಮೇಲೂ "ಸುಪ್ರು" ವಿನ ತಲೆಮೇಲೂ, ಕೊಠಡಿಯಲ್ಲೂ ಮೀರೆಯ ಬಾಯಿಂದಲೂ ಶಾಯಿ ಚೆಲ್ಲಿಹೋಯಿತು.

"ಮೆಲ್ಲನೆ ಹೇಳಿದರೂ ಬಾರದು!" ಎಂದೆ. (ಸ್ವಲ್ಪ ನಂಜು)

"ನಿಮ್ಮ ಮಾತಿನಂತೆ!" ಎಂದಳು ಮೀರೆ. (ಚತುರೋಕ್ತಿ.)

"ಅಥವಾ ಮದುವೆಯಾದ ಗಂಡಸಿನ ಪೌರುಷದಂತೆ!" ಎಂದೆ (ಚತುರೋಕ್ತಿ ಮತ್ತು ನಂಜು.)

"ಅಥವಾ ಪೌರುಷ ಕಳೆದುಕೊಂಡ ಗಂಡಸಿನ ಹೆಂಡತಿಯು ಸುಖ ದಂತೆ!" ಅಂದಳು ಮೀರೆ. (ನೂರುಮಡಿ ನಂಜು.)

"ಅಥವಾ ಸುಖವನ್ನು ದುಃಖವೆಂದು ಕರೆದು ಗಂಡನನ್ನು ಗೋಳಾಡಿ ಸುವ ಹೆಂಡತಿಯ ಮತಿಯಂತೆ!" ಅಂದೆ (ನಂಜಿನ ಅರಸು)

"ಅಂಜಲಿಯನ್ನು ಅಮೃತವೆಂದು ಕರೆಯಬೇಕೆಂದು ಒತ್ತಾಯಪಡಿಸು ವವರ ಸೌಜನ್ಯದಂತೆ!" ಎಂದಳು ಮೀರೆ. (ಹಾಲಾಹಲ)

ಅಲ್ಲಿ ನನ್ನ ಚತುರೋಕ್ತಿ ಮುಗಿಯಿತು ನಾನು ಗಂಡಸೂ ಅಲ್ಲ, ಸುಖಕೊಡುವವನೂ ಅಲ್ಲ; ಕೊಡಬಲ್ಲವನೂ ಅಲ್ಲ, ಕೊಡಲೂ ಆರ— ಎಂದು ನನಗೆ ತಿಳಿಯಿತು. ಮೊದಲೇ ಕಳವಳ ಆ ಮೇಲೆ ಶಾಯಿಯ ನಷ್ಟ, ಆ ಮೇಲೆ ಮೀರೆಯ ಹಾಲಾಹಲ!—ಆಗಲೇ "ಸುಪ್ರು" ಪುನಃ ನನ್ನ ಮುಂದೆ ಸುಳಿದಾಡುತ್ತಾ "ತ್ರೆ ತ್ರೆ ತ್ರೆ" ಎಂದು, ಮೇಜಿನ ಮೇಲಿರಿಸಿದ ಫೌಂಟನಿಗೆ ಕೈಹಾಕುತಿದ್ದನು ಆಕೆ, ಅಲ್ಲಿಯೂ ಆತನನ್ನು ಪ್ರೀತಿಯಿಂದ ತಬ್ಬಿದಳು

"ಹೆತ್ತವರಿಗೆ ಹೆಗ್ಗಣ ಮುದ್ದು!" ಎಂದೆ (ಸುಪ್ರುವು ನನಗೆ ಹೆಗ್ಗಣ ದಂತೇ ಕಂಡಿರಲಿಲ್ಲದಿದ್ದರೂ)

ಕೂಡಲೇ ಮಳೆ ಬಂತು "ದೇವಾ, ನನಗೆ ಎಲ್ಲಿ ಜನ್ಮ ಕೊಟ್ಟೆ? ಎಲ್ಲಿ ಕೊಟ್ಟೆ, ಏನುಮಾಡಿದೆ?" ಎಂದು ಮೀರೆ,—ನನ್ನ ಆಯವ್ಯಯದ ಪಟ್ಟಿಯನ್ನು ಸರಿದೂಗಲು ಕುಳಿತ ಪರಮಾತ್ಮನಿಗೆ ತಾನೂ ಒಂದು ಅರ್ಜಿ ಮಾಡಿದಳು.

"ಜನ್ಮಕೊಟ್ಟದ್ದು ಒಂದು ಕುಗ್ರಾಮದಲ್ಲಿರುವ ಪಟಾಕಿ ಮಾಲೆ ಯಂತಹ ಕುಟುಂಬದಲ್ಲಿ, ಕೊಟ್ಟದ್ದು ಬಡವನಾದ ನನ್ನ ಸ್ವರ್ಗದಲ್ಲಿ; ಮಾಡಿದ್ದು ಅನ್ಯಾಯ"—ಎಂದೆ. ಆ ಮೇಲೆ "ಹೆಗ್ಗಣ"ವನ್ನು ನೋಡಿ— (ನನ್ನ ಮಗು ನಂಬ್ರ 1)-"ಮತ್ತು ಈ ಹೆಗ್ಗಣದ ಸೃಷ್ಟಿ!" ಎಂದು ಒಂದು ನಿಟ್ಟುಸಿರಿಟ್ಟೆ.

ಸುಪ್ರುವಿಗೆ ಅದೇನೂ ತಿಳಿಯದಿದ್ದರೂ ನಗುತ್ತ ಫೌಂಟನನ್ನು ತೆಗೆ ದನು. "ಮೂರುವರೆ ರೂಪಾಯಿ ಬೆಲೆ ಸ್ವಾಮಿ; ಅದನ್ನು ಒಡೆದು ಹಾಕಿ ದರೆ ತಮಗೇನೂ ಪ್ರಯೋಜನವಿಲ್ಲ!" ಎಂದು ಆತನಿಗೆ ಸುಭಾಷಿತವನ್ನು

ಹೇಳಿ, ಫೌಂಟನನ್ನು ತೆಗೆದು, ನನ್ನ ಅಂಗಿಕಿಸೆಯಲ್ಲಿ ಭದ್ರವಾಗಿ ಇಟ್ಟು ಕೊಂಡೆ.

ಮಳೆ ಜೋರು ಬಂತು ಮೀರೆ ಸುಪ್ರುವನ್ನು ಬಳಿಗೆಳೆದು ಅಪ್ಪಿಕೊಂಡು, ಬಂಗಾರದಂತಹ ಮಗುವೆಂದಳು, ಹೆಗ್ಗಣ ಖಂಡಿತವಲ್ಲವೆಂದಳು, ಹಾಗೆ ಹೇಳುವವರು ಮನುಷ್ಯರಲ್ಲವೆಂದಳು, ತನ್ನ ಮಗುವನ್ನು ತಾನೇ ಹೆಗ್ಗಣವೆನ್ನುವವರಿಗೆ ಹೃದಯವೇ ಇಲ್ಲವೆಂದಳು, ಆ ಮೇಲೆ,—

—ತಾನು ತವರುಮನೆಗೆ ಹೊರಟೆನೆಂದಳು!

"ಅಥವಾ ಟ್ರೈನಿಂಗ್ ಶಾಲೆಗೆ!" ಎಂದೆ

"ತವರುಮನೆಯೆಂಬುದು ಟ್ರೈನಿಂಗ್ ಶಾಲೆಯೇ? ಏಕೆ?" ಎಂದು ಅಳುತ್ತ ಕೇಳಿದಳು.

"ಗಂಡನನ್ನು ಹದಮಾಡಲು ತರಬೇತಿ ಪಡೆಯಲಿಕ್ಕೆ!" ಎಂದೆ.

"ಗಂಡನ ಮನೆ ಮೃಗಾಲಯವೇ? ಗಂಡನು ಮೃಗವೇ?" ಎಂದು ಅಳುತ್ತಲೇ ನಂಜು ಮಾತಾಡಿದಳು.

"ಗಂಡನು ಗೂಡಿನಲ್ಲಿಟ್ಟ ಸಿಂಹ!" ಎಂದೆ

"ಹಾಗಾದರೆ, ನಾನು ಬಂಧನವನ್ನು ಕಡಿದುಕೊಳ್ಳುವ ಸಿಂಹಿಣಿ!" ಎನ್ನುತ್ತ, ಮೀರೆ, ಸುಪ್ರುವನ್ನು ಎತ್ತಿಹಿಡಿದು, ನಿಂತಳು.

"ಬಾಗಿಲು ಇತ್ತ ಅಲ್ಲ—ಆ ಕಡೆ!" ಎಂದು ದಾರಿತೋರಿಸಿದೆ

"ರಾತ್ರಿಯಾಯಿತೆಂದು ಹೆದರುವವಳಲ್ಲ!" ಎಂದಳು

"ಸಿಂಹಿಣಿ—" ಎಂದೆ.

"ಇನ್ನು ಬರುವುದಿಲ್ಲ" ಎಂದಳು.

"ನನ್ನ ಆಶೀರ್ವಾದ!" ಎಂದೆ

"ಆ ಮೇಲೆ ತಮಗೆ ಸುಖವಾಗಬಹುದು!" ಎಂದಳು.

"ಈಗಲೇ ಕೊಂಚ ನಾಡಿಗಳೆಲ್ಲ ಉಲ್ಲಾಸಿತವಾಗಿವೆ" ಎಂದೆ

"ನನ್ನ ಸೀರೆ, ಕುಪ್ಪಸ, ಪೆಟ್ಟಿಗೆ ಯಾವದೂ ನನಗೆ ಬೇಡ!" ಎಂದಳು.

"ನಿನ್ನ ಜ್ಞಾಪಕಾರ್ಥವಾಗಿ ಇಟ್ಟುಕೊಳ್ಳುವೆನು!" ಎಂದೆ.

"ನಾನೀಗಲೇ ಆತ್ಮಹತ್ಯೆಮಾಡಿಕೊಳ್ಳುವೆನು!" ಎಂದಳು

ಅಲ್ಲಿ ನನ್ನ ಎದೆ ಝುಮ್ಮಾಯಿತು. ಇದು ಸ್ವಲ್ಪ ವಿಪರೀತ! ಮೀರೆ

ಈ ತನಕ ಆತ್ಮಹತ್ಯೆಮಾಡಿಕೊಳ್ಳುವೆನೆಂದುದಿಲ್ಲ. ಹಟಮಾರಿ! ಎಲ್ಲಾದರೂ ಕೋಪದಿಂದ ತೂಗಿಕೊಂಡರೆ? ಇಲ್ಲವೆ ಬಾವಿಗೆ ಹಾರಿದರೆ?

"ಮೀರಾ, ಕೇಳು!" ಅಂದೆ.

"ಖಂಡಿತವಾಗಿಯೂ ಇಲ್ಲ!"

"ನಾನು ತಮಾಷೆಗಾಗಿ ಹೇಳಿದೆನಲ್ಲವೇ?"

"ಹೆಗ್ಗಣ—! ಅಯ್ಯೋ!"

"ಇಲ್ಲ ಮೀರಾ, ನಮ್ಮ ಸುಪ್ರುವಿನಷ್ಟು ಸುಂದರ ಮಗು ಈ ದೇಶದಲ್ಲಿಲ್ಲ!"

"ದೇಶವೇ?—" ಎಂದು, ಮೀರೆ ಮಗುವನ್ನು ಕೆಳಗಿಳಿಸಿ, ನೊಂದ ನುಡಿಯಲ್ಲಿ ಪ್ರಶ್ನಿಸಿದಳು.

"ಇಡೀ ಲೋಕದಲ್ಲೆ ಇರದೆಂದು ಖಂಡಿತವಾಗಿ ಹೇಳುವೆನು!" ಎಂದು, ಮೇರು ಪರ್ವತದಷ್ಟು ಎತ್ತರವಾದ ಸುಳ್ಳನ್ನು ಹೇಳಿದೆ

"ಲೋಕದ ಎಲ್ಲಾ ಹೆಗ್ಗಣಗಳನ್ನು ನೀವು ನೋಡಿರುವಿರಷ್ಟೆ!" ಎಂದಳು.

"ಹಾಗಲ್ಲ ಮೀರಾ ಹೆತ್ತವರಿಗೆ ಹೆಗ್ಗಣ ಮುದ್ದು ಎಂದು ಗಾದೆ. ಈಗ ನೋಡು, ನಮ್ಮ ನೆರೆಕರೆಯ ಯಮುನೆ ಹದಿನೇಳು ಹೆಗ್ಗಣಗಳನ್ನು ಹೆತ್ತು, ಇನ್ನು ಹದಿನೇಳನ್ನು ಹೆರಲು ಸಿದ್ಧಳು! ಒಂದು ಮಗುವಿಗೆ ತಲೆಗೆ ಕೂದಲೇ ಇಲ್ಲ—ಮತ್ತೊಂದರ ಕಣ್ಣುಗಳನ್ನು ನೋಡಿ ಧೈರ್ಯಶಾಲಿಯಾದ ನೀನೇ ಹೆದರಿದುದುಂಟು; ಇನ್ನೊಂದರ ಹೊಟ್ಟೆಯ ಗಾತ್ರವನ್ನು ನೆನೆದರೆ ನನಗೆ ಸಂಸಾರವೇ ಬೇಡವೆನ್ನುವಷ್ಟು ಜುಗುಪ್ಸೆ ಹುಟ್ಟುತ್ತದೆ. ಆದರೆ ಆಕೆ ನನ್ನ ಮಕ್ಕಳಷ್ಟು ಮುದ್ದು ಮಕ್ಕಳೇ ಊರಲ್ಲಿಲ್ಲವೆನ್ನುವುದಿಲ್ಲವೆ ಕೆಲವೊಮ್ಮೆ ಆ ಪ್ರಕೃತಿಯ ವಿಕಾರಗಳನ್ನು 'ಅರಗಿಣಿಗಳೆನ್ನುತ್ತಾಳಲ್ಲ ಹೆತ್ತವರಿಗೆ ಹೆಗ್ಗಣ ಮುದ್ದು, ಮೀರಾ"

"ನಮ್ಮ ಸುಪ್ರುವೂ ಹಾಗೇ ಕಾಣುವನೆಂದು ನಿಮ್ಮ ಅಭಿಪ್ರಾಯವೇ ಅಯ್ಯೋ, ಇದ್ದುದರಲ್ಲಿ ಗಂಡುಮಗುವೊಂದೇ!"

"ಬೇಸರಪಡಬೇಡ. ಇನ್ನು ಹದಿನೆಂಟು ಹುಟ್ಟಲೂ ಬಹುದ ಲೋಕಕ್ಕೆ ಹೇಗೆ ಕಂಡರೂ ನಮಗೆ ಮಾತ್ರ ಮುದ್ದು ಮುದ್ದು!"

"ಲೋಕಕ್ಕೆ ಹೆಗ್ಗಣವೆ?"

"ಅದಕ್ಕೆ ನಾವೇನೂ ಮಾಡಲಾಗುವುದಿಲ್ಲ ಕಪ್ಪೆಯೆನ್ನುವವರೂ ಇದ್ದಾರೆ ಭಿನ್ನರುಚಿ ಲೋಕಕ್ಕೆ!"

"ಹೆಗ್ಗಣ—ಕಪ್ಪೆ!—ಪ್ರಾಣಿಶಾಸ್ತ್ರದ ಪ್ರೊಫೆಸರರೇ ನೀವು,—ನನ್ನ ಮುದ್ದನ್ನು ಹಾಗೆ ಹೆಸರಿಸಲಿಕ್ಕೆ?"

"ನನ್ನ ಅಭಿಪ್ರಾಯವಲ್ಲ—ಲೋಕದ್ದು ನನಗೆ ಸುಪ್ರುವು ಸುಪ್ರುವಿನಂತೆ ಕಾಣುತ್ತಾನೆ ಬಹಳ ಚಂದ ಮಗು! ಮಾತಾಡಿದರೆ ಮುದ್ದಾದ ಗಿಳಿಯಂತೆ; ಅತ್ತರೆ ಖಾನನ ಗಾಯನ; ನಕ್ಕರೆ ಹುಣ್ಣಿಮೆಯ ಬೆಳದಿಂಗಳು,—ಅತಿಶಯೋಕ್ತಿಯಲ್ಲ"

ಮೀರೆಯು ಕಿಸಕ್ಕೆಂದು ನಕ್ಕಳು

"ಭಾರೀ ಕವಿ ನೀವು!" ಎಂದಳು.

"ವಿಪರೀತ!" ಅಂದೆ

ಮತ್ತೊಮ್ಮೆ ನಕ್ಕಳು, ಬಿರುಸಾಗಿ ನಕ್ಕಳು ಆ ಮೇಲೆ, ಗಿಳಿಯಂತೆ ಮಾತಾಡಿ, ಖಾನನಂತೆ ಅತ್ತು, ಹುಣ್ಣಿಮೆಯ ಬೆಳದಿಂಗಳಂತೆ ನಗುವ ತನ್ನ ಲೋಕೈಕ ಸುಂದರ ಪುತ್ರನನ್ನು ಎತ್ತಲು ಕೈನೀಡಿದಳು. ಲೋಕೈಕ ಸುಂದರನು ಅಲ್ಲಿರಲಿಲ್ಲ!

"ಅಮ್ಮಯ್ಯ—ಎಲ್ಲಿ ಹೋದನು ತುಂಟ?" ಎನ್ನುತ್ತ, ಮತ್ತೊಂದು ಕೊಠಡಿಗೆ ಹೊರಟುಹೋದಳು

ಒಂದು ಪ್ರಾಣವನ್ನು ಉಳಿಸಿದ, ಒಂದು ಮಹಾ ಸೈನ್ಯವನ್ನು ಗೆದ್ದ, ಒಂದು ತುಫಾನಿನಲ್ಲಿ ಮುಳುಗದೆ ಉಳಿದ—ಸಂತೋಷದಲ್ಲಿ ನಾನು ಸ್ವಲ್ಪ ನಕ್ಕುಬಿಟ್ಟೆ ಅಷ್ಟರಲ್ಲಿ ಕೇಳಿಸಿತು—"ರಣಹದ್ದೇ!—ಕೋತಿ!!—ಕಳ್ಳ ಬೆಕ್ಕೇ!!!—. .. ... !!!!"—ಅದರ ಹಿಂದೆ, ಸುಮಾರು ಐನೂರು ಗುದ್ದುಗಳು; ಆ ಮೇಲೆ, ಖಾನನ ಗಾಯನ (ಆಲಾಪನ ವಿಶೇಷ!)

ಮೆಲ್ಲನೆ ಎದ್ದು, ಆ ಕೊಠಡಿಗೆ ಹೋದೆ. ವಿಶೇಷವೇನೂ ಅಲ್ಲ;—ಸುಪ್ರುವು, ಕೈಯಲ್ಲಿ ಮೀರೆಯ "ನೇತ್ರಾವತಿ ಸ್ನೋ" ಬಾಟಲಿಯನ್ನು ಹಿಡಿದುಕೊಂಡು ಅಳುತಿದ್ದನು ಮೀರೆ, 501ನೇ ಗುದ್ದನ್ನು ಹೊಡೆಯಲು ಕೈಯೆತ್ತಿದ್ದಳು.

"ಶಾಂತಿ ಶಾಂತಿ" ಎನ್ನುತ್ತ ಮಗುವನ್ನೆತ್ತಿದೆ. ಅಷ್ಟರಲ್ಲಿ ಮಿಾರಿ 555ನೇ ಗುದ್ದನ್ನು ಹೊಡೆದು 556ಕ್ಕೆ ಸಿದ್ಧತೆ ನಡೆಸುತ್ತ, "ಎಂಥ ಶಾಂತಿ?— ಬಾಟಲಿಯೆಲ್ಲ ಮುಗಿಯಿತು! ರಣಹದ್ದೇ ......." ಎಂದಳು.

"ನಮ್ಮ ಸುಪ್ರು!" ಅಂದೆ.

"ನಮ್ಮದಲ್ಲ—ನಿಮ್ಮ ಅನ್ನಿ. ಆ ಕೋತಿ—ಆ ಹೆಗ್ಗಣ .. ."

"ಹೆತ್ತವರದ್ದು—ಮುದ್ದು!" ಎನ್ನುತ್ತ, ನನ್ನ ಹೆಗ್ಗಣವನ್ನೊಮ್ಮೆ ಚುಂಬಿಸಿದೆ

ಪರಾಜಿತಳಾದಳೆಂದು ಭಾಸವಾಗಿ ಮಿಾರಿಗೆ ಕೋಪ ಹೆಚ್ಚಿ ಮುಂದು ವರಿದು ಬಂದಳು. ಆದರೆ, ನಾನು ನನ್ನ ಲೋಕೈಕ ಸುಂದರವಾದ ಹೆಗ್ಗಣ ವನ್ನು ಹಿಡಿದುಕೊಂಡು, ಕೋಣೆಯಿಂದ ಕೋಣೆಗೆ ಅರ್ಧತಾಸಿನ ತನಕ ಓಡಿ ಓಡಿ, ಮಿಾರಿಯ ಗುದ್ದುಗಳೆಲ್ಲವನ್ನೂ ವಿಷಕಂಠನಂತೆ ಪಡೆಯದಿದ್ದರೆ ನಮ್ಮ ಮುದ್ದು ಹೆಗ್ಗಣವು ಗುದ್ದಿನ ಹೆಣವಾಗುತಿತ್ತೇನೋ!

"ಸ್ನೋ ಹೋದರೆ ಅಷ್ಟು ಬಿರುಸಾಗಿ ಹೇಳಬೇಕೆ? ಹಾಗೆ ಹೇಳಿದರೆ ಹೋದದ್ದು ಪುನಃ ಬರುವುದೇ?" ಎನ್ನಬೇಕೆಂದಿದ್ದೆ, ಆದರೆ,—

---

# ೮. ಮನೆ ಕೈಗಾರಿಕೆ

ಸೂರ್ಯನ ಸುತ್ತಲಾಗಲಿ ಶನಿಯ ಸುತ್ತಲಾಗಲಿ ಭೂಮಿಯು ತಿರು ಗುತ್ತಲೇ ಇರುವುದು ನಿರ್ವಿವಾದ ಹಾಗೆ ಸುತ್ತುವಾಗ, ಪ್ರತಿಯೊಂದು ಸುತ್ತಿನಲ್ಲಿ, ಕುಂಬಾರನ ತಿಗುರಿಯಲ್ಲಿ ತಿರುಗುವ ಗಡಿಗೆಯಲ್ಲಾಗುವಂತೆ ಏನಾದರೊಂದು ಮಾರ್ಪಾಟವುಂಟಾಗುತ್ತಿರುವುದೂ ಖಂಡಿತ. ಅದನ್ನೆ ಪ್ರಾಜ್ಞರು 'ಪ್ರಗತಿ'ಯೆನ್ನುವರು ಅಂತಹ ಐದು ಸಾವಿರ ಮತ್ತು ಚಿಲ್ಲರೆ ಸುತ್ತುಗಳಾದವೆಂದು ನಾವು ಪಂಚಾಂಗದಲ್ಲಿ ಓದುತಿದ್ದೇವೆ ಆರನೇ ಸಾವಿ ರಕ್ಕೆ ತಲಪುವಾಗ ಉಂಟಾದ ಪ್ರಗತಿಕಾಲವನ್ನು "ಟೂತ್ ಪೌಡರ್ ಯುಗ"ವೆನ್ನಬಹುದು

ಮೀರೆ ಯಾವಾಗಲೂ ಹೇಳುತಿದ್ದಳು—ಸಂಪಾದನೆಯೊಂದಿಗೆ ಏನಾದರೂ ಉಪ ಸಂಪಾದನೆಯೂ ಇರಬೇಕೆಂದು ಆದರೆ, 'ಗಿಂಬಳ' ತಿನ್ನುವ ಯಾವ ಇಲಾಖೆಗೂ ನಾನು ಸೇರದಂತೆ ವಿಧಿಯು ಅನ್ಯಾಯ ಮಾಡಿದುದರಿಂದ,—ಮುಖ್ಯ ಸಂಪಾದನೆಯೆಂಬುದೇ ಪರಮ ಪವಿತ್ರವೆಂದೂ ಇದ್ದುದರಲ್ಲಿಯೇ ತೃಪ್ತಿ ಪಡುವವನಿಗಿಂತ ಸುಖಿಯು ಮತ್ತಾರೂ ಎಲ್ಲಿಯೂ ಇರಲಾರನೆಂದೂ ಆಕೆಗೆ ತತ್ವಜ್ಞಾನ ಬೋಧಿಸಲು ಯತ್ನಿಸಿದೆ. ತಲಬು ಹೆಚ್ಚಲಿಲ್ಲವೇಕೆಂದು ನಿತ್ಯವೂ ಹಲುಬುತ್ತಿರುವಿರೆಂದು, ಕೇಳಿದಳು ಅದು ನಿನಗೆ ತಿಳಿಯದೆಂದೂ, ಸುಮಾರು ಮೂರು ಸಾವಿರ ವರುಷಗಳ ಹಿಂದೆ ಪರಾಶರ ಮುನಿಯು ಹೇಳಿದುದನ್ನೆ ಈಗ ನಾನು ಹೇಳಿದೆನೆಂದೂ ಹೇಳಿದೆ. ಇನ್ನಾವ ಮುನಿಯ ಹೆಸರು ನನಗೆ ಬರುವುದೆಂದು ಪ್ರಶ್ನಿಸಿದಳು ಶಂಕರಾಚಾರ್ಯ, ವಸಿಷ್ಟ, ನಾರದ, ಶುಕ, ಕ್ರಿಸ್ತ, ನಾನಕ, ಮುಹಮ್ಮದ-ಅವರೆಲ್ಲರೂ ಹೇಳಿರುವರೆಂದು, ಮುಖದ ಒಂದು ನಿರಿಯನ್ನೂ ಅತ್ತಿತ್ತ ಮಾಡದೆ ಉತ್ತರ ಕೊಟ್ಟೆ

"ನಿಮಗೆ ನಾಚಿಕೆಯಾಗುವುದಿಲ್ಲವೆ?" ಎಂದಳು.

"ಎಳ್ಳಷ್ಟೂ ಇಲ್ಲ, ನಾಚಿಕೆಯಾಗಲಿ ಮರ್ಯಾದೆಯಾಗಲಿ ಮನಸ್ಸಿನಿಂದ ಕಲ್ಪಿತವಾದುವು!" ಎಂದೆ

"ಅದೇ ಮನಸ್ಸಿನಿಂದ ಉಪ ಸಂಪಾದನೆಯ ಒಂದು ಮಾರ್ಗವನ್ನು ಹುಡುಕಿರಿ ನೋಡೋಣ!'' ಎಂದಳು

''ನೀನೆ ಹೇಳಿಕೊಡು.''

"ಕಾರಕೂನರೇ ದೊರೆಯದೆ ಲೆಕ್ಕಗಳೆಲ್ಲ ಮರೆತು ಕಂಗಾಲಾದ ಕಟ್ಟಿಗೆ ಡಿಪೋಗಳನ್ನು ಹುಡುಕಿ, ಸಾಯಂಕಾಲ ೬ರಿಂದ ೮ರ ತನಕ ಅವರ ಲೆಕ್ಕ ಬರೆವ ಕರಣೀಕನಾಗಬಾರದೇ?''

ದೇವ!— ನೀನೆಲ್ಲಿರುವೆ!—

ಅಸಾಧ್ಯವೆಂಬ ಶಬ್ದವೇ ತನ್ನ ನಿಘಂಟಿನಲ್ಲಿಲ್ಲವೆಂದು ನುಡಿದು ಮಡಿದ ನೆಪೋಲಿಯನನು ಈಗ ಇಲ್ಲವಲ್ಲ!-ಇದ್ದಿದ್ದರೆ ಅವನನ್ನು ಕರೆದು, ಮೀರೆಯ ಪ್ರಶ್ನೆಯನ್ನು ಅವನಿಗೆ ಹಾಕಿ ಅವನ ನಿಘಂಟಿನಲ್ಲಿ ಬರೆಸುತಿದ್ದೆ—'ಅಸಾಧ್ಯ' ವೆಂದು! ಕಟ್ಟಿಗೆ ಡಿಪೋ!—ಇದ ಏಳು ಡಿಪೋಗಳಿಂದ ಕಟ್ಟಿಗೆ ತಂದು

ಎಣ್ಣೆ ಹಾಕಿ ಮಿಂದು, ಇನ್ನು ಐದಾರು ಒಂದನೇ ತಾರೀಕುಗಳ ವರೆಗೆ ಅತ್ತ ಸುಳಿಯಲಾರದವರು ಆ ಮೊದಲೇ ಅಲ್ಲಿ ಕೆಲಸ ಕೊಡಿರೆಂದು ಹೋಗ ಲುಂಟೇ? ನನ್ನ ಸಾಲವನ್ನು ಮತ್ತೆ ನಾನೇ ಬರೆದು ಓದಬೇಕೆ? ಕಾರಕೂನ ರಿಲ್ಲದಿದ್ದರೂ ಅವರು ಆ ಲೆಕ್ಕವನ್ನು ಮರೆಯುವುದು ಸಾಧ್ಯವೇ?

'ಮೀರಾ! ಕಳವಳಗೊಳಿಸುವ ಸ್ಥಳನಾಮವನ್ನುಚ್ಚರಿಸಬೇಡ, ಗಾಣಿಗ ಐತಪ್ಪನಲ್ಲಿ ಕೆಲಸಕ್ಕೆ ನಿಲ್ಲೆಂದರೂ ಚಿಂತೆಯಿಲ್ಲ,—ಕಟ್ಟಿಗೆ ಡಿಪೋ ಎಂದು ಮಾತ್ರ ಆಡಬೇಡ!' ಎಂದೆ.

"ಚಿಕ್ಕ ಜೀನಸಿನ ಅಂಗಡಿಯೂ ಆಗಬಹುದು!"

"ಚಿಕ್ಕ ಜೀನಸಿನ ಅಂಗಡಿಯವರಿಗೆ ಕಾರಕೂನರೇಕೆ?"

"ದೊಡ್ಡ ಅಂಗಡಿಗಳಿಲ್ಲವೇ?"

"ಅಲ್ಲಿ ಮೊದಲೇ ಕಾರಕೂನರಿರುವರು."

"ಮಧ್ಯಮ.... ..."

"ನಿಲ್ಲು!" ಅಂದೆ ಒಂದು ಆಲೋಚನೆ ಆಗಲೇ ಹೊಳೆದಿತ್ತು

"ಏನು?" ಎಂದಳು

"ಒಂದು ಒಳ್ಳೇ ಆಲೋಚನೆಯಾಗಿದೆ, ನೀನು ಒಪ್ಪುವಿಯೋ ಇಲ್ಲವೊ!"

"ಬಹಳ ಒಳ್ಳೇದಾದರೆ ಒಪ್ಪದೆ ಏನು?"

"ಟೂತ್‌ಪೌಡರ್!"

"ಚಿಂತೆಯಿಲ್ಲ!" ಎಂದು ಸಂತೋಷದಿಂದ ನೆಗೆದಳು

"ಆದರೆ ಮಾಡಬೇಕಲ್ಲವೆ? ಹೇಗೆ?"

"ಬಹು ಸುಲಭ ಚೋಕ್ ಇದೆಯಲ್ಲ, ಅದನ್ನು ತರುವುದು; ಹುಡಿ ಮಾಡುವುದು; ಕರ್ಪೂರ ಸೇರಿಸುವುದು; ಒಂದಿಷ್ಟು ಸಕ್ಕರೆ ಬೆರಸು ವುದು, ಕೆಂಪಗಿನ ರಂಗಿನ ಹುಡಿ ದೊರೆಯುತ್ತದೆ—ಅದನ್ನು ಒಂದಿಷ್ಟು ಕೂಡಿಸುವುದು ಪೆಕೇಟಿಗೆ ಒಂದಾಣೆ—ಕರಡಿಗೆಗಾದರೆ ನಾಲ್ಕಾಣೆ— ಬಾಟಲಿಗೆ ಎಂಟಾಣೆ—ದೊಡ್ಡ ಸೈಜು ಹತ್ತಾಣೆ. ರಖಂ ತರಿಸುವವರಿಗೆ ರೂಪಾಯಿಯ ಮೇಲೆ ಮೂರು ಪೈ ಡಿಸ್ಕೌಂಟು ಕೊಡಲಾಗುವುದು. ನಮ್ಮ ಪ್ರಾತಿನಿಧ್ಯವಿಲ್ಲದ ಎಲ್ಲಾ ಕಡೆಗಳಲ್ಲಿಯೂ ಏಜಂಟರು ಬೇಕು ಶರ್ತಗಳಿ

ಗಾಗಿ ಬರೆದುಕೊಳ್ಳಿ. ಸೋಲ್ ಏಜಂಟರು "ಮೀರಾ ಎಂಡ್ ಕೋ"— ಟೂತ್ ಪೌಡರಿನ ಹೆಸರು "ಮೀರಾ ಟೂತ್ ಪೌಡರ್!"—ಅಲ್ಲಿ ಉಸಿರಿಗಾಗಿ ಕೊಂಚ ತಡೆದು, ಅನುಮೋದನೆಗಾಗಿ ಮೀರೆಯ ಕಡೆಗೆ ನೋಡಿದೆ.

"ಆಗಬಹುದು. ನಮಗೂ ಇನ್ನು ಕ್ರಯಕೊಟ್ಟು ತರಬೇಕಾಗಿಲ್ಲ!" ಎಂದಳು.

"ಮೀರಾ!—ನಮಗೆ ಬಹುಕಾಲದ ಹಿಂದೆಯೆ ಈ ಆಲೋಚನೆ ಹೊಳೆದರೆ ಹಲ್ಲುನೋವು ಇರುತ್ತಲೇ ಇರಲಿಲ್ಲ ಭಗವಂತಾ! ಎಷ್ಟು ಹಣವನ್ನು ನಾವು ಟೂತ್ ಪೌಡರಿಗೆ ವ್ಯಯಿಸಿದೆವು!"

"ಬ್ರಶ್ಶನ್ನೂ ಮಾಡಬಹುದಿತ್ತು!" ಎಂದು ಮರುಗಿದಳು ಮೀರೆ.

"ಮೀರಾ! ಬ್ರಶ್ಶನ್ನು ಮಾಡುವುದು ಲಾಭಕರವಲ್ಲ ಅದಕ್ಕೆ ಉಪಕರಣಗಳೂ ಅನೇಕ ಬೇಕು ನಾವೇ ಬ್ರಶ್ ಮಾಡಿದರೆ ಒಂದಕ್ಕೆ ಹನ್ನೆರಡಾಣೆ ತಗಲುವುದು—ಆದರೆ, ಎಂಟಾಣೆಗೆ ವಿಕ್ರಯಿಸಬೇಕಾಗುವುದು"

"ಟೂತ್ ಪೌಡರಿಗಾದರೆ?"

"ಅರ್ಧಾಣೆಗೊಂದು ಕರಡಿಗೆ, ಮಾರಾಟ ನಾಲ್ಕಾಣೆಗೊಂದು"

"ಎಷ್ಟು ಲಾಭ! . .ಊರಿನ ಜನರೆಲ್ಲ ಟೂತ್‌ಪೌಡರ್ ಮಾಡುವುದಿಲ್ಲವೇಕೊ!"

ಏಕೆಂದರೆ ಎಲ್ಲರೂ ಮಾಡಿದರೆ ಮಾರುವವರಾರು? ಕೊಂಡುಕೊಳ್ಳುವವರಾರು?"

"ನಿಜ!"

ಪೇಟೆಗೆ ಹೋಗಿ ಆರಾಣೆಯ ಚೋಕ್ ತಂದೆ. ಹುಡಿಯಾಯಿತು ಮೀರೆ ಸುಮಾರು ಕಾಲು ಪಾವು ಹುಡಿಯನ್ನು ತಿಕ್ಕಿ ಮೂವತ್ತೆರಡು ಹಲ್ಲುಗಳನ್ನೂ ತೊಳೆದಳು. ಆ ದಿನ ನಮ್ಮ ಮಧ್ಯಾಹ್ನ ಭೋಜನ ಮುಗಿವಾಗ ಮೂರು ಘಂಟೆ!

* * * * * *

"ಬ್ರಹ್ಮನೂ ಮಲಗಿ ನಿದ್ರಿಸುವಂತಹ ಭಯಂಕರ ರಾತ್ರಿ!"

" ..ಅಯ್ಯೋ!" ಎಂದಳು ಮೀರೆ.

ಗಾಬರಿಯಿಂದ ಎಚ್ಚೆತ್ತು ನಾನು, "ಏನಾಯಿತು?" ಎಂದೆ.

"ಹಲ್ಲುನೋವು!"

ಮೈ ಝುಮ್ಮೆಂದಿತು!—"ನಮ್ಮ ಟೂತ್‌ಪೌಡರಿನಿಂದ ಒಮ್ಮೆ ಆ ಹಲ್ಲುಗಳನ್ನು.... !" ಎಂದು ಸೂಚಿಸ ಹೋದೆ

"ಮಾತಾಡಬೇಡಿ—ಪ್ರಾಣ ಹೋಗುತ್ತದೆ! ಆ ಟೂತ್‌ಪೌಡರಿನ ಸುದ್ದಿಯೆತ್ತಬೇಡಿ!—ಅದರದೇ ಫಲವಿದು!" ಎಂದು ಗೋಳಾಡಿದಳು

ನನ್ನ ಕೈಕಾಲುಗಳೆಲ್ಲ ತಣ್ಣಗಾದುವು ಟೂತ್‌ಪೌಡರನ್ನು ಮಾಡಲು ಪ್ರೇರಣೆ ಕೊಟ್ಟ ದೈವವನ್ನು ಶಪಿಸಿ, "ಮೀರಾ, ನೀಲಗಿರಿ ಎಣ್ಣೆಯನ್ನೊಮ್ಮೆ ಆ ಹಲ್ಲುಗಳಿಗೆ ತಿಕ್ಕಿಬಿಡು!" ಎಂದೆ.

"ನೀಲಗಿರಿಯ ಮಾತೆತ್ತಬೇಡಿರಿ! ಒಂದು ಮೆಣಸನ್ನು ತನ್ನಿರಿ!"

ಅಡಿಗೆ ಕೋಣೆಯನ್ನೆಲ್ಲ ಅಡಿಮೇಲು ಮಾಡಿ ಪ್ರಯಾಸದಿಂದ, ಚಂದ್ರದ್ರೋಣವನ್ನು ತಂದಂತೆ ಒಂದು ಮೆಣಸನ್ನೆತ್ತಿಕೊಂಡು ಓಡಿ ಬಂದು, ಮೀರೆಯ ಕೈಗೆ ಕೊಟ್ಟೆ ಅದನ್ನು ಸೀಳಿ, ಕೆಂಪಗಿನ ದಾರವನ್ನು ಹಲ್ಲಿಗೆ ಇಟ್ಟಳು. ಆ ಮೇಲೆ ಮತ್ತೊಮ್ಮೆ "ಅಯ್ಯೋ!" ಅಂದಳು

"ಏನಾಗುತ್ತದೆ—ಮೀರಾ—ಪರಮಾತ್ಮಾ!"

"ನಿಲ್ಲುವುದಿಲ್ಲ ಈ ನೋವು!"

"ಏನು ಮಾಡಲೀಗ?"

"ಆ ಟೂತ್‌ಪೌಡರನ್ನೆಲ್ಲ ಚೆಲ್ಲಿಬಿನ್ನಿರಿ!"

"ಮಾರಾಟ... ."

"ಮಾರಾಟ ಮಾಡಿದರೆ ಜನರ ಹಾರಾಟವನ್ನು ತಡೆವರಾರು? ಕರಡಿಗೆಗೊಂದು ರೂಪಾಯಿಯ ಪೌಡರ್ ಆದರೂ ನಮ್ಮ ಶತ್ರುಗಳಿಗೂ ಬೇಡವದು! ಇದ್ದ ಒಂದೆರಡು ಹಲ್ಲುಗಳನ್ನಾದರೂ ಮಾವಿನೆಲೆಯಿಂದ ತಿಕ್ಕಿಕೊಂಡು ಇರಲಿ ಅವರು, ಪಾಪ!" ಎಂದು ತಡೆದು ತಡೆದು ಹೇಳಿದಳು.

ಮೀರೆಯ ಸ್ವಭಾವ ನನಗೆ ಗೊತ್ತು ಆ ಪೌಡರನ್ನೆಲ್ಲ ಹೊರಚೆಲ್ಲದೆ ಆಕೆಯ ನೋವು ನಿಲ್ಲದು ಗಡಿಗೆಯನ್ನೆತ್ತಿಕೊಂಡು ಹೋಗಿ, ಪೌಡರನ್ನು ಬಿಸುಡಿ, ಬರಿದಾದ ಗಡಿಗೆಯನ್ನು ತಂದು, ಅವಳ ಮುಂದಿಟ್ಟೆ ನಾನು ಹೇಳಿದಂತೆಯೇ—ತಕ್ಷಣ ಆಕೆಯ ನೋವು ನಿಂತಿತಲ್ಲ!

ನೋವು ನಿಂತ ಮೇಲೆ ಆಕೆಯೊಡನೆ ಕೇಳಿದೆ—"ಇನ್ನು ನಮಗೆ ಉಪ

ಸಂಪಾದನೆಗೆ ಗತಿಯೇನು?" ಎಂದು.

"ಇದ್ದ ಹಣದಿಂದ ಇಂತಹ ಪೌಡರುಗಳನ್ನು ಮಾಡದೆ ಇರೋದು!" ಅಂದಳು.

ಏನು ಮುಸುಡು! ನೋವು ಈಗಾಗಲೇ ನಿಂತ ಮೀರೆಯನ್ನು ಕೆಣಕುವುದು ಹಿತವಲ್ಲವೆಂದು ನನಗೆ ಗೊತ್ತು ಆದರೂ ಕೋಪವನ್ನು ತಡೆಯಲಾರದೆ—"ಪರಾಶರನ ಮಾತನ್ನು ನೀನು ನಂಬಲಿಲ್ಲವಲ್ಲ—ಏಕೆ?" ಅಂದೆ

ಗಂಗಾಪ್ರವಾಹ! ಭಸಕ್ಕನೆ ಐದಾರು ಕುಡುತೆ ಕಣ್ಣೀರು ಇಳಿಸಿ, "ಪರಾಶರನು ಇಲ್ಲದ ಈ ಕಾಲದಲ್ಲಿ ಗಂಡಸರು ಹೆಂಡತಿಯನ್ನು ಕೊಲ್ಲುವ ಟೂತ್ ಪೌಡರನ್ನು ಮಾತ್ರ ಮಾಡಬಲ್ಲರೆಂದು ನನಗೇನು ಗೊತ್ತು?" ಎಂದು ಕಿರಚುತ್ತ, ಧಾರಾಳ ಅತ್ತಳು

ಸರಿ!

ಟೂತ್ ಪೌಡರ್ ಕೈಗಾರಿಕೆಯವರಿಗೊಂದು ಮಾತು:—ಮನುಷ್ಯರಿಗೆ ಹಲ್ಲುಗಳಿರುವಷ್ಟು ಕಾಲ ನೀವು ಮನೆ ಕೈಗಾರಿಕೆಯೆಂದು ಟೂತ್ ಪೌಡರ್ ಮಾಡಿ ಸುಖದಿಂದ ಜೀವನ ನಡೆಸಿಕೊಂಡಿರಬಹುದು. ಆದರೆ, ನಿಮ್ಮಾಕೆ ಮಾತ್ರ ಅದನ್ನುಪಯೋಗಿಸದಂತೆ ಎಚ್ಚರಿಕೆಯಿರಲಿ!

---

# ೯. ಎಮ್ಮೆಯೂ ಹೊಟ್ಟೆನೋವೂ

ಮೀರೆ ಪತ್ರಿಕೆ ಓದುತ್ತಿದ್ದಳು; ನಾನು ಹೊಟ್ಟೆಯ ಮೇಲೆ ಕೈಯಿಟ್ಟು, ಮಿಲ್ಕ್ ಒಫ್ ಮೆಗ್ನೆಸಿಯ, ಡಾಕ್ಟರ್ ಡೀನರ ಸ್ಟಾಮಕ್ ಪೌಡರ್, ಸುಬ್ರಾಮು ಚೆಟ್ಟಿಯವರ ಶುದ್ಧವಾದ ನೀಲಗಿರಿ ತೈಲ, ನಾಲ್ಕನೆ ತರಗತಿಯ ಪಠ್ಯಪುಸ್ತಕದೊಳಗಿನ 'ಹೊಟ್ಟೆಯೂ ಅದರ ಜಾಗ್ರತೆ'ಯೂ ಎಂಬ ಪಾಠ ಇವಿಷ್ಟನ್ನೂ ಚಿಂತಿಸುತಿದ್ದೆ

"ಮೀರಾ, ಹೊಟ್ಟೆನೋವಾದರೆ ಏನುಮಾಡಬೇಕು?" ಎಂದು ಕೇಳಿದೆ

"ಗ್ರೈಪ್‌ವಾಟರನ್ನು ಕುಡಿಯಬೇಕು" ಅಂದಳು.

"ಅದರ................"

"ಅದು ಮಕ್ಕಳ ಅಜೀರ್ಣವನ್ನು ಹೋಗಲಾಡಿಸಿ, ಎದೆಯ ಉರಿಯನ್ನು ನಿಲ್ಲಿಸಿ, ಆಮ್ಲತೆಯನ್ನು ನೀಗಿ, ಮಗುವನ್ನು ತಮ್ಮಣಿಸಿ, ಸುಖನಿದ್ದೆ ಕೊಡುವುದು" ಎಂದು ಭಾಷಣಮಾಡಿ, ತುಟಿ ಸಂಕೋಚಿಸಿ, ಕಣ್ಣರಳಿಸಿ, ಮಹಾಮಹೋಪಾಧ್ಯಾಯರ ಚರ್ಯೆ ಹಿಡಿದಳು

"ನಾನು ಮಗುವಲ್ಲ" ಅಂದೆ.

"ಮಕ್ಕಳಷ್ಟೆ ತಿನ್ನುವವರು ಮಕ್ಕಳೆ" ಅಂದಳು

"ಆದರೆ ಎಷ್ಟನ್ನು ತಿಂದರೆ ಮಕ್ಕಳು?" ಅಂದೆ.

"ಮಕ್ಕಳಿಗೆ ತಿನ್ನುವುದರಲ್ಲಿ ತಾರತಮ್ಯವಿಲ್ಲ" ಅಂದಳು

"ನನ್ನನ್ನು ನೋಡಿದರೆ ನಾನು ಹೆಚ್ಚು ತಿನ್ನುವವನೆಂದು ಯಾರೂ ಹೇಳರು" ಅಂದೆ

"ಹಾಗೆ ಕಾಣುವವರು ಹೆಚ್ಚು ತಿನ್ನುವುದರಿಂದಲೇ ಗ್ರೈಪ್ ವಾಟರ್ ಕುಡಿವ ಯೋಗ್ಯತೆಯುಂಟಾಗುತ್ತದೆ" ಅಂದಳು.

"ನನ್ನ ಹೊಟ್ಟೆನೋವು ಹೆಚ್ಚುತ್ತಿದೆ, ಹಾಗೆ ಮಾತಾಡಬೇಡ" ಅಂದೆ.

"ಅದಕ್ಕೆ ನಾನೇನೂ ಮಾಡಲಾಗುವುದಿಲ್ಲ. ಪತ್ರಿಕೆಯಲ್ಲಿದ್ದುದನ್ನು ಓದಿ ಹೇಳಿದ್ದೇನೆ" ಅಂದಳು

"ಮೀರಾ!"

"ಪುನಃ ಏನು?" ಎಂದು ಕೇಳಿದಳು.

"ಹಲ್ಲುನೋವುಂಟಾದರೆ ಏನು ಮಾಡಬೇಕು, ಗೊತ್ತೆ?"

"ಹಲ್ಲುನೋವಿಲ್ಲ ಈಗ!"

"ಇನ್ನು ಬರಬಹುದು!"

"ಬಂದಾಗ ಪ್ರಶ್ನೆ, ಅನಂತರ ಉತ್ತರ; ಈಗ ನನಗೆ ತಲೆಸಿಡಿಯುತ್ತದೆ. ಮಾತಾಡಬೇಡಿ!"

"ಮೀರಾ, ತಲೆಗೊಂದು ರಾಮಬಾಣವಿದೆ. ಹೇಳಲೆ?"

ತಟಕ್ಕನೆ ಮೀರೆ ಕುರ್ಚಿಯಿಂದೆದ್ದು ನಿಂತಳು ನಮ್ಮ ಮುಂದಿನ ಮೇಜನ್ನು ನೋಡುತ್ತ ಅದರ ರಚನಾ ಸೌಂದರ್ಯವನ್ನಾನಂದಿಸುವಾಗ, ಅದು ಹಾರಿ ನಿಂತು ಕಣ್ಣು ಕೆರಳಿಸಿದ ಹಾಗಾಯಿತು "ಕೋಪವೆಂದರೆ ಹೊಲೆಯು!" ಎಂದೆ.

"ಗಂಡಸರು ಮಹಾಮೂರ್ಖರು!" ಅಂದಳು.

"ಜಾಣರನ್ನು ಹಾಗೆ ಕರೆಯುವ ರೂಢಿ, ಈ ಮರ್ತ್ಯ ಲೋಕದಲ್ಲಿ!" ಎಂದೆ.

"ಹೊಟ್ಟೆ ನೋವಾದರೆ ಹೆಂಡತಿಯನ್ನು ಪ್ರಶ್ನಿಸುವ ಗಂಡುಸರು ಮೂರ್ಖರೆ!" ಎಂದಳು

"ಮದ್ದು ಹೇಳದೆ ಜಾಹೀರಾತನ್ನೋದಿ ಹೇಳುವ ಹೆಂಗುಸು ಜಾಣಳಲ್ಲ" ಎಂದೆ

"ನಾನು ಹೇಳಿದ ಮದ್ದನ್ನು ತಿನ್ನುವ ಮನಸ್ಸಿಲ್ಲದವರಿಗೆ ಜಾಹಿರಾತನ್ನು ಓದಿ ಹೇಳದಿರಬಹುದೆ?" ಅಂದಳು

"ಹೇಳಬಾರದೆ?"

"ಒಂದು ತೊಲೆ ಹಸಿ ಶುಂಠಿಯನ್ನೂ ..."

ಶುಂಠಿಗೊಂದು ದೇವತೆಯಿದ್ದರೆ...... ಹೇ ಶುಂಠಿ ದೇವತೆ! ಬ್ರೆಝಿಲಿನಲ್ಲಿ ಕಾಫಿ ಸುಡುವಂತೆ ನಿನ್ನನ್ನು ದೂರಕ್ಕೊಯ್ದು ಹೂಳಲಾರರೇ?

".... .ಗುರಗುಂಜಿಯಷ್ಟು ಹಿಂಗನ್ನೂ . ..."

ಹೇ ದಾಮುಷ್ಕಿ, ಮಾಧವ್ಜಿ ಮೊದಲಾದ ಹಿಂಗಿನ ಅರಸರೇ!

"........ಅನಂತರ. .."

"ಮೀರಾ, ನಿಲ್ಲು! 'ಅನಂತರ'ಗಳಿವೆಯಾದರೆ, ನನ್ನ ಅರ್ಜಿಯನ್ನು ಹಿಂದೆಗೆಯುತ್ತೇನೆ! ನಿನ್ನ ತೃಪ್ತಿಗಾಗಿ, ನನ್ನ ಕ್ಷೇಮಕ್ಕಾಗಿ,—ನನಗೆ ಹೊಟ್ಟೆಯೇ ಇಲ್ಲವೆಂದು ಭಾವಿಸಬೇಕಾಗಿ ಅಪೇಕ್ಷಿಸುತ್ತೇನೆ!" ಎಂದೆ

"ಹಾಗೆ ಹೇಳಬೇಡಿ ಹೊಟ್ಟೆಯಿಲ್ಲದಿದ್ದರೆ ತಲೆಯೂ ಇಲ್ಲವೆಂಬರ್ಥ. ದೇಶೀ ಔಷಧ—ಖರ್ಚು ಕಡಿಮೆ—ಹೊಟ್ಟೆಗೆ ಅಮೃತ—ಪ್ರತಿಕ್ರಿಯಾ ಭಯವಿಲ್ಲ—ಇತ್ಯಾದಿ" ಎಂದಳು

"ನಾನು ದೇಶಭಕ್ತ—ಹಣವಿಲ್ಲದ ಕಾರಣ ಖರ್ಚೇ ಇಲ್ಲ—ಹೊಟ್ಟೆಗೆ ವಿಷ ಬಯಸುವವನಲ್ಲ—ಪ್ರತಿಕ್ರಿಯೆಗೆಡೆಕೊಡಲು ಪ್ರಥಮ ಕ್ರಿಯೆಗೆ ಒಪ್ಪಲಾರೆ,—ಇತ್ಯಾದಿ" ಎಂದೆ.

"ನಿಲ್ಲಿರಿ" ಎಂದಳು ಮೀರೆ.

ನಿಲ್ಲಿಸಿದೆ

"ನಿಮ್ಮೊಡನೆ ಒಂದು ಮಹತ್ವದ ವಿಚಾರ ಹೇಳಲಿದೆ. ಕೂತುಕೊಂಡರಾಗಬಹುದು" ಎಂದಳು

ಕುಳಿತುಕೊಂಡೆ

ಆರಂಭಿಸಿದಳು "ಮೈಸೂರಿನ ಮೂಲ ಚರಿತ್ರವನ್ನು ಕೇಳಿದ್ದೆ. ಆಲೋಚಿಸುವಾಗ ಏನೇನೋ ಹೊರಡುವುದು ಮಹಿಷಾಸುರನೆಂದು "

"ಮೀರಾ, ಹೇಳಬೇಡ ಎಲ್ಲ ಗೊತ್ತಿದೆ ನೀನು ಆಲೋಚಿಸಿದ್ದನ್ನೆಲ್ಲ ಹೇಳಬೇಡ. ಕೊನೆಯ ಅಭಿಪ್ರಾಯ ಮಾತ್ರ ಹೇಳು!"

"ಅಲ್ಲ, ನಾವು ಒಂದು ಎಮ್ಮೆ ಕೊಂಡುಕೊಂಡರೆ ಹೇಗೆ?"

ಅವಾಕ್ಕಾದೆ—ತಲೆತಿರುಗಿದ್ದೇ ದೃಷ್ಟಿ ಸಿಕ್ಕಾಬಟ್ಟೆ ಓಡಿದ್ದೆ ನನ್ನ ಮುಂದಿರುವ ಮೀರೆ, ದೀಪ ಮತ್ತು ಮೇಜು, ಇವು ನಾಲ್ಕರಂತೆ ಒಟ್ಟು ಹನ್ನೆರಡು!

"ಏನು, ಮಾತೇ ಇಲ್ಲ? ಏನಾಲೋಚನೆ?" ಎಂದಳು

"ಆ ಮಹಿಷಾಸುರ ಮರ್ಧಿನಿ, ಚಿನ್ನದಂಥಾ ಹೆಂಗಸರಿಗೆ ಈ ಬುದ್ಧಿ ಏಕೆ ಕೊಡುತ್ತಿರುವರುವಳೆಂದಾಶ್ಚರ್ಯಪಡುತಿದ್ದೆ!" ಎಂದೆ

"ನಿಮಗಿನ್ನೂ ಬುದ್ಧಿ ಇಲ್ಲ ಖರ್ಚಿಗಿಲ್ಲವೆನ್ನುತ್ತೀರಿ. ಒಂದು ಎಮ್ಮೆ ಎಂದರೆ ಒಂದು ಮನೆ, ನಾಲ್ಕು ಜೀವಿಗಳ ಜೀವನ, ಹೊಟ್ಟೆ ತುಂಬ ಹಾಲು, ತಟ್ಟೆ ತುಂಬ ತುಪ್ಪ, ಬಟ್ಟಲು ತುಂಬ ಮೊಸರು ಮತ್ತು . ....."

"..... .ಮನೆ ತುಂಬ ನುಸಿ, ಕಾಲು ತುಂಬ ಫೈಲೇರಿಯಾ, ದೇಹ ತುಂಬ ಜ್ವರ, ತಲೆ ತುಂಬ ಯೋಚನೆ ...... "

"ಸಾಕುಮಾಡಿರಿ!" ಎಂದಳು

"ಮಾಡುವುದಿಲ್ಲ, ಖಂಡಿತವಾಗಿಯೂ ಇಲ್ಲ; ಅಂಗಳ ತುಂಬ ಸಗಣಿ, ಊರು ತುಂಬ ನಾತ.... ..."

"ಇಸ್ಸೀ, ನಿಮಗೇಕೆ ಎಮ್ಮೆಯ ಮೇಲೆ ಹಾಗೆ ಹಗೆ" ಎಂದಳು

"ನನಗೆ ಆ ಎಮ್ಮೆಯ ಮುಖ ನೋಡಿದರೇ ಆಗುವುದಿಲ್ಲ. ದೇವರಿರುವನಾದರೆ ಎಮ್ಮೆಗೆ ಅಷ್ಟು ಅಸಹ್ಯಕರ ಮುಖ ಕೊಟ್ಟನೇಕೆ ಎಂದೆನಿಸುತ್ತದೆ."

"ಎಮ್ಮೆಗೆ ಮತ್ತೆ ಪದ್ಮಿನಿಯ ಮುಖ ಎಲ್ಲಿಂದ ಬರಬೇಕು? ನಿಮಗೆ

ಎಮ್ಮೆ ಚಂದಗಾಣುವುದಿಲ್ಲವೆಂದು, ದೇವರು ಅದನ್ನು ತಿದ್ದುವ ಹಾಗಿಲ್ಲ. ಬದಲಾಗಿ, ಕೆಲವು ಗಂಡಸರ ಕೋಣದ ರೂಪವನ್ನು ತಿದ್ದಿದರಾಗ ಬಹುದಿತ್ತೆನ್ನಿ!"

"ಕೆಲವು ಗಂಡಸರು ಕೋಣಗಳನ್ನು ಹೋಲುತ್ತಾರಾದರೆ, ಹೆಚ್ಚು ಹೆಂಗಸರು ಕರಡಿಗಳಂತಿದ್ದಾರೆ ಅದಿರಲಿ. ಈಗ ನೀನು ಆ ಮಹಾ ಆಕ್ಷೇಪಕರ ಜೀವಿಯನ್ನು ಖರೀದಿಮಾಡದ ಹಾಗೆ ನಾನೇನು ಮಾಡ ಬೇಕೆಂದು ಹೇಳು."

"ಸುಮ್ಮನೆ ದೇವರ ಆ ಸುಂದರ ಪ್ರಾಣಿಯನ್ನು ದೂರಬೇಡಿ! ಯಾರಿಗೂ ತಂಟೆ ಇಲ್ಲ ನೀವು ಎಷ್ಟು ಮಾತಾಡಿದರೂ ನನಗೆ ಎರಡೆಮ್ಮೆ ಕೊಂಡುಕೊಳ್ಳಬೇಕು!"

"ಏನು, ಎರಡೇ?"

"ಪೂರ್ಣ ಎರಡು, ಒಂದೂವರೆಯಲ್ಲ!"

"ಎರಡೇಕೆ ಮೀರಾ? ಕೊಂಡುಕೊಳ್ಳುವುದೇ ಆದರೆ, ಒಂದು ಸಾಕು."

"ಇಲ್ಲ, ಎರಡು ಬೇಕು ಹಾಲು ಹೆಚ್ಚು, ಲಾಭ ಹೆಚ್ಚು."

"ನೋಡು ಮೀರಾ, ಒಂದೆಮ್ಮೆಗೆ ಇನ್ನೂರಕ್ಕಿಂತ ಕಡಮೆ ಇಲ್ಲ. ಎರಡಕ್ಕೆ ನಾಲ್ನೂರಾಯಿತು. ನನಗೆ ಸಿಗುವ ಸಂಬಳ ಅದರ ಕಾಲುವಾಸಿ."

"ಎಲ್ಲರೂ ದುಡ್ಡು ಕೊಟ್ಟೇ ಎಮ್ಮೆ ತರುತ್ತಾರೆಯೇ? ಸಾಲ ಮಾಡ ಬೇಕು. ಕದಿರೆಯ ಗಂಗಕ್ಕ ನೋಡಿ, ಎಮ್ಮೆ ಕೊಂಡುಕೊಂಡಳು ಮೂರು! ಎಲ್ಲ ಸಾಲ! ಆರು ತಿಂಗಳೊಳಗೆ ಸಾಲತೀರಿ, ನಾಲ್ಕು ಪಾಟ್ಲೆ ಮಾಡಿಸಿ, ಹುಡುಗನಿಗೆ ಮುಂಜಿಮಾಡಿ . . "

". ....ಈಗ ವಾತದಿಂದಿದ್ದು, ನಾರಾಯಣ ಪಂಡಿತನಿಗೆ ಕಾಲು ಮಣ ಮಹಾನಾರಾಯಣ ತೈಲದ ರೂಪಾಯಿ ತೆತ್ತಳು, ನಿಜ! ಆದರೆ, ನೋಡು ಆ ಎಮ್ಮೆಗೆ ಹಟ್ಟಿ ಬೇಕು."

"ಹಿತ್ತಿಲಿದೆ!"

"ಹಾಲು ಕರೆಯುವವರು ಬೇಕು!"

"ಕಿಟ್ಟಪ್ಪನಿಗೆ ದಿನಕ್ಕೊಂದಾಣೆ ಕೊಟ್ಟರಾಯಿತು "

"ಹಾಲು ಇರಬೇಕು!"

"ಹತ್ತಿಬೀಜ ಮತ್ತು ಹಿಂಡಿ ಹಾಕಿದರೆ ಸರ್‍ರನೆ ಹೊರಡುತ್ತದೆ "

"ಹತ್ತಿ ಬೀಜಕ್ಕೆ ದುಡ್ಡು ಬೇಕು "

"ಹಾಲಿನಿಂದ ದೊರೆಯುತ್ತದೆ "

"ಅದು 'ಬೀಜ-ಹಾಲು ನ್ಯಾಯ'ವಾಯಿತು. ಇರಲಿ, ಅದರ ಚಾಕರಿಗೆ ಒಂದು ಜನ ಬೇಕು."

"ನಾನಿದ್ದೇನೆ."

"ನಿನ್ನ ಚಾಕರಿಗೊಂದು ಜನಬೇಕು!"

"ನೀ.... ... ......."

"ಯಾರು, ನಾನೇ?!"

"ಅಲ್ಲ, ನೀಲಮ್ಮ ಇದ್ದಾಳೆ."

"ನೀಲಮ್ಮನಿಗೆ ದುಡ್ಡು ಬೇಕು."

"ಎಮ್ಮೆಗಳಿವೆ."

ನನಗೆ ಉಸಿರುಕಟ್ಟಿತು. "ಅಹುದು, ಎಮ್ಮೆಗಳಿವೆ. ಎಮ್ಮೆಗಳಿಗೆ ಹಿತ್ತಿಲಿದೆ! ಹಿತ್ತಿಲಿಗೆ ಬೇಂಕಿ ಇದೆ. ಬೇಂಕಿಗೆ ಪೆಟ್ಟಿಗೆ ಇದೆ. ನನ್ನ ಪೆಟ್ಟಿಗೆಗೆ ಕೂತಿದೆ. ಇದನ್ನೆಲ್ಲ ನೋಡಲು ನಾನಿದ್ದೇನೆ. ನೀನು ಎಮ್ಮೆ ಕೊಂಡು ಕೊಂಡರೆ—ಅಕೊ ಮಿರಾ, ಜೋಕೆ! ನಾನು ಊರು ಬಿಡುತ್ತೇನೆ!" ಎಂದೆ.

"ಯಾವ ಊರಿಗೆ ಹೋಗುತ್ತೇನೆಂದು ತಿಳಿಸಿರಿ. ಮುಟ್ಟಿದ ಕೂಡಲೇ ಕಾಗದವನ್ನು ಬರೆಯಿರಿ! ಖರ್ಚಿಗೆ, ಇಲ್ಲಿಂದಲೇ ದುಡ್ಡು ಕಳಿಸುವ ಹಾಗೆ ಅನುಕೂಲವಾಗಲು, ನಿಮ್ಮ ಆತಂಕಗಳಿಲ್ಲದೆ ಎಮ್ಮೆ ಸಾಕಿ, ಹಾಲುಮಾರು ತ್ತೇನೆ" ಎಂದಳು

ಎಮ್ಮೆಗಳನ್ನು ಸೃಷ್ಟಿಸಿದ ದೇವ! ನೀನು ಸೃಷ್ಟಿಸಿದ ಎಮ್ಮೆಗಳಲ್ಲಿ ಕೆಲವದರಲ್ಲಿ ಮಾತ್ರ ಯಥೇಷ್ಟ ಹಾಲನ್ನು ತುಂಬಿ, ನೆಮ್ಮದಿಯಿಂದಿರುವ ಹೆಂಗುಸರನ್ನು ಅವುಗಳ ಖರೀದಿಗೆ ಆಕರ್ಷಿಸಿ,—ಆಕರ್ಷಿಸಲ್ಪಟ್ಟ ಆ ಹೆಂಗು ಸರ ಎಮ್ಮೆಗಳನ್ನೇಕೆ ಕೋಣಗಳಷ್ಟು ಕ್ಷೀರವಿಹೀನರನ್ನಾಗಿ ಮಾಡುವೆ?

—"ಮಿರಾ, ಕೆಲವೆಮ್ಮೆಗಳು ಹಾಲೇ ಕೊಡುವುದಿಲ್ಲ!" ಎಂದೆ.

"ಅಂಥ ಎಮ್ಮೆಗಳಿಗೆ ಯಾರೂ ದುಡ್ಡು ಕೊಡುವುದಿಲ್ಲ!" ಎಂದಳು.

"ಕೊಂಡುಕೊಳ್ಳುವಾಗ ಕೊಂಚ ಇರುತ್ತದೆ, ಮತ್ತೆ ಬೇಗನೆ ಬತ್ತಿ ಹೋಗುತ್ತದೆ'' ಎಂದೆ.

"ಕೂಡಲೇ ಹಾಲು ಹುಟ್ಟುವ ಹಾಗೆ ಔಷಧಿಯಿದೆ; ಇಲ್ಲದಿದ್ದರೆ, ಬದಲಾಯಿಸಿ, ಹೊಸದನ್ನು ಪಡೆಯುತ್ತಾರೆ'' ಎಂದಳು

"ನೀನು ಎಮ್ಮೆ ಹಟ ಬಿಡಲೊಲ್ಲೆಯಾ?'' ಎಂದೆ.

"ಕೋಣನ ಕೋಪ ನೀವು ಬಿಡಬಾರದೆ?'' ಎಂದಳು.

ಏನು ಮುಸುಡು!

"ನಾನು ಈ ಮನೆಯಲ್ಲಿ, ಎಮ್ಮೆ ಖರೀದಿಯ ಠರಾವು ಹಿಂದೆಗೆಯಲ್ಪಡುವ ತನಕ ಊಟಮಾಡಲೊಲ್ಲೆ!'' ಎಂದೆ.

"ಈ ದಿನ ಪದಾರ್ಥವೂ ಒಳ್ಳೆದಿಲ್ಲ'' ಎಂದಳು.

ನೆಟ್ಟಗೆ ಹೋಗಿ, ಹಾಸಿಗೆಯಲ್ಲಿ ಬಿದ್ದುಕೊಂಡೆ ಅಳಲಿಲ್ಲ. ಗಂಡುಸರು ಅಳಬಾರದಂತೆ

ಸ್ವಪ್ನ ಎಮ್ಮೆದ್ದೇ! ಮೀರೆ, ನೀಲಗಿರಿಯಷ್ಟು ಎತ್ತರ ಎಮ್ಮೆ ಕೊಂಡುಕೊಂಡಳಂತೆ ಕುತುಬ್‌ಮಿನಾರಿನಷ್ಟು ಎತ್ತರದ ಆಳು, ಹಾಲುಗರೆದನಂತೆ. ಇಳಿದುದು ಕಾಲುಸೇರಂತೆ! ಹಿಂಡಿ ಅಂಗಡಿಯವ, ಎಪ್ಪತ್ತು ಖಂಡಿ ಹಿಂಡಿಯ ದುಡ್ಡಿಗಾಗಿ ನನಗೆ ರಿಜಿಸ್ಟ್ರಿ ನೋಟೀಸು ಕೊಟ್ಟನಂತೆ! 'ಬಾತ್ಮಿದಾರರ ಅಭಿಪ್ರಾಯಗಳಿಗೆ ನಾವು ಜವಾಬ್ದಾರರಲ್ಲ', ಹೇಗೋ ಹಾಗೇ 'ಚಂಡಿಯಂಥ ಹೆಂಡಿರ ಹಿಂಡಿಗೆ ದಂಡ ನಮ್ಮದಲ್ಲ'ವೆಂದು ನಾನು ಉತ್ತರಕೊಟ್ಟೆನಂತೆ. ಕೋಪಬಂದುದು ಎಮ್ಮೆಗಂತೆ ಅದು ಬಂದು ನನ್ನ ಎದೆಯ ಮೇಲೆ ಕುಳಿತುಕೊಂಡು "ಕೊಡಿರಿ ದುಡ್ಡು, ಏಳಿರಿ!'' ಎಂದು ಗದರಿಸಿ........

ಕಣ್ಬಿಟ್ಟೆ. ಮೀರೆ ನನ್ನ ಎದೆತಟ್ಟಿ "ಏಳಿರಿ, ಏಳಿರಿ" ಎನ್ನುತ್ತಿದ್ದಳು.

"ಎಮ್ಮೆ?" ಎನ್ನುತ್ತ ಅತ್ತಿತ್ತ ನೋಡಿದೆ.

"ಆ ಸುಬ್ಬಿಯ ಎಮ್ಮೆ—ಕತ್ತೆರಂ—ನಮ್ಮ ಸುಗಂಧಿ ಗಿಡಗಳೆಲ್ಲ. .. ........" ಎಂದು ಕಣ್ಣೀರು ಸುರಿಸಿದಳು

ನಮ್ಮ ಸುಗಂಧಿ ಗಿಡಗಳೆಲ್ಲ ಸುಬ್ಬಿಯ ಎಮ್ಮೆಯಲ್ಲವೆಂದು ನನಗೆ ಗೊತ್ತು. "ಎಮ್ಮೆ ಅವನ್ನೆಲ್ಲ ತಿನ್ನಿತೆಂಬ ಅರ್ಥವೇ?" ಎಂದು ಕೇಳಿದೆ.

"ಮತ್ತೇನನ್ನು ಹೇಳುತ್ತಿದ್ದೇನಂತೆ? ಬೇರು ಸಹ ಇಲ್ಲ! ದಿನಕ್ಕೆ

ಏವತ್ತು ಸುಗಂಧಿ ಹುಟ್ಟುತಿತ್ತು!" ಎಂದು ಪುನಃ ಅತ್ತಳು

"ಅದಕ್ಕೇಕೆ ನೀನು ಅಳುವೆ? ಅದರ ಹಾಲಿಗೇನೂ ಸುಗಂಧಿ ಪರಿಮಳ ಸಿಗುವ ಹಾಗಿಲ್ಲ!" ಎಂದೆ

"ಅಲ್ಲ, ಆ ಸುಟ್ಟಮೂತಿನ ರಾಕ್ಷಸಿ... "

"ಸುಮ್ಮನೆ ದೂರಬೇಡ! ದೇವರ ಆ ಸುಂದರ ಪ್ರಾಣಿ!"

"ಸತ್ತಿತು, ಆ ಸುಂದರ ಪ್ರಾಣಿ!"

"ಅಯ್ಯೋ! ಯಾರಿಗೂ ತೊಂದರೆ ಕೊಡದ ಆ ಪುಣ್ಯವಂತ ಜೀವಿ! ಮೀರಿ, ನೀಲಮ್ಮ ಮತ್ತು ಕಿಟ್ಟಪ್ಪ—ಈ ಮೂರೂ ಮಹನ್ ವ್ಯಕ್ತಿಗಳ ಆರೈಕೆಗೆ ಅಣಿಯಾಗುತ್ತಲಿದ್ದ ಆ ಭಾಗ್ಯವಂತ ನರಲೋಕದೇವತೆ! ಸತ್ತರೆ, ಅದಕ್ಕೆ ಸ್ವರ್ಗ!" ಎಂದೆ

"ಅಯ್ಯೋ ದೇವಾ, ಗಂಡುಸರ ನಿಷ್ಠೂರ ಹೃದಯವೇ! ಆ ಸುಗಂಧಿ ಗಿಡಗಳಿಗೆ ಒಂದು ಬೇಲಿಹಾಕಿಸಿರೆಂದರೆ . .."

" .. ತನ್ನ ಹಾಲಿನಿಂದ ಮೀರಾಪತಿಯ ದೇಹವನ್ನು ಪರಪೂರಿನಲ್ಲಿ ಪೋಷಿಸುವ ಆ ಸೌಭಾಗ್ಯವತಮ್ಮ, ಎಮ್ಮೆ! ಆ ಪದ್ಮಿನಿವದನೆ! ಆ ದೊಡ್ಡ ಕಣ್ಣಿನ ಕಾಮಧೇನು! ಆ ಹೇಮಾಂಗಿ! ಹಸಿವಾದರೆ ಡೊರೊಂಯ್ ಎಂದು ದಿವ್ಯಗಾನ ಮಾಡುವ ಆ ಗಾನವಿಶಾರದೆ! ಕೆಸರನ್ನು ಕಂಡರೆ, ಅದರಲ್ಲಿಳಿದು ಮೇಲಕ್ಕೆ ಬರಲೊಪ್ಪದ ಆ ಶುಚಿಭೂತೆ! ನವದ್ವಾರಗಳಿಂದಲೂ ಕಡಲೆ ಗಾತ್ರದ ನುಸಿಗಳನ್ನು ಹೆರುವ ಆ ವಿಶ್ವಕುಟುಂಬಿ! ಆ.... ."

"ನೋಡಿ, ನೀವು ಸುಮ್ಮನೆ ನನ್ನನ್ನು ಕೆಣಕಬೇಡಿ!"

"ಖಂಡಿತವಾಗಿ ಇಲ್ಲ ಸುಗಂಧಿ ಗಿಡ ತಿಂದುದು ನೀನಲ್ಲ!"

"ನೀವಿನ್ನು ಎಮ್ಮೆಯ ಮಾತು ತೆಗೆದರೆ ನಾನು ಬಾವಿಗೆ ಹಾರುತ್ತೇನೆ!"

"ಅದರಿಂದ ಎಮ್ಮೆಗೇನೂ ಬೇಸರವಿಲ್ಲ; ಬಾವಿಗೂ ಇಲ್ಲ. ನೀನು ಎಮ್ಮೆ ಕೊಂಡುಕೊಳ್ಳದೆ ಉಳಿದ ಹಣದಿಂದ ನಾನು ಹಗ್ಗತರಿಸಿ ನಿನ್ನನ್ನು ಬಾವಿಯಿಂದ ತೆಗೆಸಿ, ಉಪಚರಿಸುತ್ತೇನೆ".

"ನೀವು ಎಮ್ಮೆ ಸುದ್ದಿ ತೆಗೆದರೆ ಜೋಕೆ! ನಾನಿನ್ನು ಎಮ್ಮೆಯ ಹಾಲು ಕೂಡ ತೆಗೆದುಕೊಳ್ಳುವುದಿಲ್ಲವೆಂದು ಶಪಥ ಮಾಡಿದ್ದೇನೆ "

"ಅಯ್ಯೋ, ತಟ್ಟೆ ತುಂಬ ತುಪ್ಪ, ಬಟ್ಟಲು ತುಂಬ ಮೊಸರು!"

"ಇಲ್ಲ, ಇನ್ನಿಲ್ಲ ಎಮ್ಮ!"

ಮನಸ್ಸಿನಲ್ಲಿದ್ದ ನಗು ಹೊರಕ್ಕೆ ಉಕ್ಕಿ ಬಂತು "ಮೀರಾ!"

"ಏನು?"

"ಒಂದು ಅದ್ಭುತ! ನನ್ನ ಹೊಟ್ಟೆ ನೋವು ನಿಂತಿದೆ!"

"ನಿಂತಿದೆ?" ಮೀರೆ, ಆಶ್ಚರ್ಯದಿಂದ ಕೇಳಿದಳು: "ಯಾವಾಗಲೂ ಮೂರು ದಿನ ಬಿಡದೆ ಕಾಡುತಿತ್ತು!"

"ಅಹುದು, ಆದರೆ, ನಿನ್ನೆ ನಾನು ನಿನ್ನ ಎಮ್ಮೆಯ ದಯೆಯಿಂದ ಆಹಾರ ತೆಗೆದುಕೊಳ್ಳಲಿಲ್ಲ ಹೊಟ್ಟೆನೋವಿಗೆ ಊಟ ಬಿಡೋದೇ ಒಳ್ಳೆಯ ದೆಂದು ನನಗೆ ಕಂಡಿದೆ"

"ಅದು ನನಗೆ ಮೊದಲೇ ಗೊತ್ತಿರಲಿಲ್ಲವೆ! ಮಕ್ಕಳ ಹಾಗೆ ತಿನ್ನಬಾರ ದೆಂಬುದರ ಅರ್ಥ ಮತ್ತೇನಂತೆ?" ಎಂದಳು

ಅಲ್ಲಿಯೂ ಆಕೆಯ ಮೇಲ್ಗೈ! ಸುಗಂಧಿಸಂಹಾರ ವಾರ್ತೆಯಿಂದ ಮನನೊಂದವಳೊಡನೆ ಜಗಳವೇಕೆನ್ನುತ್ತ, "ಹೇಗಿದ್ದರೂ, ಎಮ್ಮೆಗೆ ಜಯ ವಾಗಲಿ!" ಅಂದೆ.

"ಆದರೆ, ಸುಬ್ಬಿಯ ಎಮ್ಮೆಗಲ್ಲ!" ಅಂದಳು

ಒಪ್ಪಿದೆ

---

# ೧೦. ಮೀಸೆ ಮತ್ತು ಅದರ ರಕ್ಷಣೆ

"ಸೆಖೆಗಾಲದಲ್ಲೇನು ಮಾಡಬೇಕೆಂಬ ವಿಷಯದಲ್ಲಿ ಈಗೀಗ ಲೇಖನ ಗಳು ಬರುತ್ತಿವೆ; ನೀವು ಕೊಂಚ ಓದಬೇಕು," ಎಂದು ಮೀರೆ, ಅತಿ ಮೃದು ವಾದ, ಆದರೆ—ನಿಶ್ಚಯವಾದ—ಧ್ವನಿಯಲ್ಲಿ ಹೇಳಿದಳು.

ನಾನು, ಸೆಖೆಗಾಗಿ ಶರ್ಟನ್ನು ತೆಗೆದು, ಒಂದು ಮೂಲೆಯಲ್ಲಿ ಮುದ್ದೆ ಯಾಗಿ ಒಗೆದು, ಬರೀ ನೆಲದ ಮೇಲೆ ಮಲಗಿ, ಇತ್ತೀಚೆಗೆ ಊರಿನ ಸೋಡಾ ಅಂಗಡಿಗಳಲ್ಲಿ ಬಂದ ಹೊಸ ರೆಫ್ರಿಝರೇಟರುಗಳನ್ನು ಚಿಂತಿಸುತ್ತಿದ್ದೆ.

"ಬಿಸಿ ನೀರಿನ ಸ್ನಾನದಿಂದ ನರಗಳು ಸಡಲಿಸಿ, ಮೈ ಶುದ್ಧವಾಗಿ....

. ....." ಮೀರೆ, ತನ್ನ ಮೊದಲಿನ ಪ್ರಶ್ನೆಗೆ ಉತ್ತರ ನಿರೀಕ್ಷಿಸದೆ, ಮುಂದು ವರಿದಳು.

ನಾನು ಸೆಖೆ ತಡೆಯಲಾರದೆ, ಐಸ್ ಹಾಕಿದ ಮಜ್ಜಿಗೆಯನ್ನು ನೆನಸಿದೆ.

"ಖಾರದ ವಸ್ತುಗಳನ್ನು ತಿನ್ನುವುದೂ, ಐಸ್ ಪಾನೀಯಗಳನ್ನು ಕುಡಿಯುವುದೂ........" ಮೀರೆ, ನನ್ನ ಒಪ್ಪಿಗೆಯನ್ನು ಇಂತಹ ಶ್ರವಣ ಸುಖಕ್ಕೆ ಬಹುಕಾಲದ ಹಿಂದೆಯೇ ಪಡೆದಂತಹ ನಂಬಿಕೆಯಿಂದ ಮುಂದುವರಿಸಿದಳು.

ಅಲ್ಲಿಯೂ ನಾನು 'ಥಂಡಾ' ಪಾನೀಯಗಳ ವಿಷಯವನ್ನು ಬಿಟ್ಟುಕೊಡದೆ, ಎಳ ನೀರನ್ನು ಕೆತ್ತಿಕೊಡುವ ಅಂಗಡಿ ಕೊರಗನ ಕಡಗದ ಕೈ-ಹೊಳಪಿನ ಚೂರಿ-ಕಾರಂಜಿ ಹಾರಿಸುವ ಆ ಕಾಯಿ ಇದನ್ನು ಚಿತ್ರಿಸಿಕೊಂಡೆ.

"ನಿಮಗೆ ತಿಂಗಳಿಗೆ ಎಂಭತ್ತು ಇದ್ದರೂ ಸಾಲದೆನ್ನುತ್ತೀರಿ ಇದನ್ನೊಮ್ಮೆ ಓದದೆ ನಿಮ್ಮ ಲೆಕ್ಕಗಳು ತಪ್ಪಿ ಬಜೇಟು ಲಾಗ ಹಾಕಿ, ತಲೆ ಕರಡಾಗಿ, ಮಾತು ಮುಚ್ಚಿಹೋಗಿ, ಮೌನದಲ್ಲಿ ಬಿದ್ದುಕೊಂಡು, ಅರ್ಧಾಂಗಿಯು ಅಂಗಲಾಚಿ ಬೇಡಿಕೊಂಡರೂ ಮುಖವೆತ್ತಿ ನೋಡದೆ, ಸೆಖೆಗಾಲದ ಕಳವಳದ ಒಂದು ಮುಖ್ಯ ಲಕ್ಷಣವಾಗಿ—ಹತ್ತಿರ ಆಡಬರುವ ಮಗುವನ್ನೂ ದೂರಕ್ಕೆ ದೂಡಿ. .... .. ."ಮೀರೆ, ನಾಗಾಲೋಟದಿಂದ ಹಾರಿ ಹೋಗುತಿದ್ದಳು.

ಆಗಲೇ ಸುಪ್ರು ('ಸುಪ್ರಸನ್ನ'=ತತ್ಸಮ, 'ಸುಪ್ರು'=ತದ್ಭವ) ಅಂಬೆಗಾಲಿಕ್ಕಿಕೊಂಡು ಬಂದು, ನನ್ನ ಮೀಸೆಯೆಳೆದನು ತಾನು ಹುಟ್ಟಿದ ಆರನೇ ತಿಂಗಳಿಂದ ಈ ಚಿಕ್ಕ ರಾಕ್ಷಸನು ಪುರುಷನ ಆ ಅತಿ ಮೌಲ್ಯದ ವಸ್ತುವಾದ ಮೀಸೆಯನ್ನು ಕಿತ್ತು ತೆಗೆದು ಎರಡು ನಿಮಿಷ ಆಟವಾಡಿ ಸುಖಪಡಬೇಕೆಂದು ಈ ತನಕ ಸುಮಾರು ಏಳುನೂರು ಬಾರಿ ಯತ್ನ ಮಾಡಿದ್ದನು. ನಾನವನನ್ನು ತಡೆದರೆ ಮೀರೆಯ ಚಿತ್ತ ಸ್ವಾಸ್ಥ್ಯ ಕೆಟ್ಟು, ನನ್ನ ಮೇಲೆ ಸ್ತ್ರೀ ಪೀಡೆಯ ಆರೋಪ ಬರುವುದೆಂದು ಚೆನ್ನಾಗಿ ತಿಳಿದು, ಅಹಿಂಸಾ ವ್ರತವನ್ನಾಚರಿಸಿ, ರಾಷ್ಟ್ರದ ಧ್ವಜವನ್ನು ರಕ್ಷಿಸಿದಂತೆ ಅದನ್ನು ರಕ್ಷಿಸಿಕೊಂಡಿದ್ದೆನು. ಈ ದಿನ ಮಾತ್ರ, ಮೀಸೆಯೆಳೆಯುತ್ತಲೇ ರೆಫ್ರಿಝರೇಟರು, ಪೀಯೂಷ, ಎಳನೀರು ಮೊದಲಾದುದೆಲ್ಲ ಒಮ್ಮೆಗೇ ಮಾಯವಾಗಿ, ಚಿಕ್ಕ

ಯೊಂದು ಕೂಗೂ ನನ್ನ ಗಂಟಲಿಂದ ಹೊರಬಿದ್ದು, ನನಗರಿಯದೆನೇ ಕೈಗಳು ತಾವಾಗಿ ಮುಂದೆ ಹೋಗಿ, ಸುಪ್ರು ಎಂಬ ಶ್ಮಶ್ರುವೈರಿಯನ್ನು ದೂಡಿಬಿಟ್ಟುವು.

ಸೋತ ಸುಪ್ರು ರೋಷದಿಂದ ಆರ್ಭಟಿ ಕೊಟ್ಟನು. ರೇಗಿದ ಮೀರೆ ಹಾರಿ, ಘಟೋತ್ಕಚನನ್ನೆತ್ತಿ, ಮೈಸವರಿ, ಪುರುಸೊತ್ತಿಲ್ಲದಿದ್ದರೂ ಕಾಲು ಸೆಕುಂದು ಅವನ ಶುಶ್ರೂಷೆ ಮಾಡಿ ಮುದ್ದಾಡಿ ಈ ಅತಿಕ್ರಮಕ್ಕೆ ಕಾರಣ ವೇನೆಂದು ನನ್ನೊಡನೆ ಪ್ರಶ್ನಿಸಿದಳು.

ಎಲ್ಲ ತರದ ಕಾನೂನೂ ನನ್ನ ಕಡೆಗೇ ಇದ್ದರೂ, ಸ್ತ್ರೀ ರಾಜ್ಯದ ಕಾನೂನಿನಂತೆ ನಾನು ಅಪರಾಧಿಯಾಗಿದ್ದೆನೆಂದು ತಿಳಿದೂ, ಮೀಸೆಯು ಕೆಳಗೆ ಸೂಜಿಗಳನ್ನೊತ್ತಿದ ನೋವು ಇರುವ ಕಾರಣ, ದೃಢತೆಯಿಂದ, "ಯಾವ ಮನುಷ್ಯನಿಗೂ, ಅವನು ಸ್ವತಃ ಮಗನೇ ಇರಲಿ, ಮೀಸೆಯೆಳೆವ ಅಧಿಕಾರವಿಲ್ಲ'' ಎಂದು ಹೇಳಿದೆ.

"ಎರಡು ವರ್ಷದ ಮಗು—ನಾಲ್ಕು ಮೀಸೆಗೆ ಮೆಲ್ಲಗೆ ಕೈಹಾಕಿದರೆ ದೊರಗು ಕೈಯಿಂದ ದೂಡುವ ನಿಷ್ಠೂರ ಹೃದಯಿಗಳೂ ಇರುವರೆಂದು ನನಗೆ ತಿಳಿದಿರಲಿಲ್ಲ''ಎಂದು ಮೀರೆ ಸುಪ್ರು ಕಡೆಯಿಂದ ವಾದಿಸಿ, ಮತ್ತೊಮ್ಮೆ ಅರ್ಧ ಸೆಕುಂಡಿನ ಅವಕಾಶ ಮಾಡಿಕೊಂಡು, ಆ ಚಿಕ್ಕ ರಾಕ್ಷಸನನ್ನು ಮುದ್ದಿಸಿದಳು.

"ಮೀಸೆಗೆ ಮೆಲ್ಲಗೆ ಕೈಹಾಕಿದರೆ ನೂರಾರು ಸೂಜಿಗಳನ್ನು ಒಮ್ಮೆಗೇ ಒತ್ತಿದಂತಾಗುತ್ತದೆ; ಬಲ ಪ್ರಯೋಗ ಮಾಡಿದರೆ ಮೇಲ್ತುಟಿಯೇ ಹರಿದು ಹೋಗುತ್ತದೆ. 'ಮೀಸೆ ಬೆಳೆಸಿದವನೇ ಬಲ್ಲ'—"ಎನ್ನುತ್ತ, "ಹೇಗಿದ್ದರೂ ಇನ್ನು, ಯಾರು ಯಾರ ಎಷ್ಟು ಮೀಸೆಯನ್ನು ಯಾವಾಗ ಹೇಗೆ ಏತಕ್ಕೆ ಎಳೆದಾಡಬಹುದು ಎಂಬ ವಿಷಯದ ಮೇಲೆ ತರ್ಕ ಮಾಡಿ ಕುಳ್ಳಿರಲು ನನಗೆ ಸಂತೋಷವೇ ಇಲ್ಲ'' ಎಂದು ಖಂಡಿತವಾಗಿ ಹೇಳಿದೆ.

"ಆದರೆ, ಮಕ್ಕಳಿಗೆ ಮೀಸೆಯು ಕುರಿತೇನು ಗೊತ್ತು? ...... ''ಎಂದು ಮೀರೆ, ದೀರ್ಘ ವಾಗ್ವಾದದ ಪ್ರಥಮಾಧ್ಯಾಯಕ್ಕೆ ಕೈಹಚ್ಚಿದಳು.

"ಮಕ್ಕಳಿಗೇನೂ ತಿಳಿದಿಲ್ಲ—ಮಕ್ಕಳ ತಂದೆಗೆ ತಿಳಿದಿದೆ! ಶ್ಮಶ್ರುವಿಗೂ ಅಶ್ರುವಿಗೂ ಹೆಚ್ಚಿನ ಅಂತರವಿಲ್ಲ—''ಎಂದು ಮುಗಿಸಲೆತ್ನಿಸಿದೆ.

"ಸುಪ್ರುವಿಗೆ ತನ್ನ ತಂದೆಯು ಮೇಲೇನೂ ದ್ವೇಷವಿಲ್ಲ. ಆಟಕ್ಕಾಗಿ ಎಳೆದನು" ಎಂದಳು ಮೀರಿ

"ಇಂತಹ ಆಟಗಳನ್ನು ತಂದೆ ಒಪ್ಪಲಾರನು. ನನ್ನ ತಂದೆಯು ಮೀಸೆಯನ್ನೆಳೆದು ನಾನು ಆಟವಾಡುತ್ತಿರಲಿಲ್ಲ, ನೋಡಿ ಹೆದರುತಿದ್ದೆ. ಇಂದಿನ ಮಕ್ಕಳು ಆ ಮೆಕ್ಕೆ ಜೋಳ ತಿಂದು ಧೈರ್ಯಹೊಂದುತ್ತಿರುವರೋ ಎಂದು ಸಂದೇಹ!'' ಎಂದೆ

''ಮೀಸೆ ಹೊತ್ತ ಗಂಡುಸರು ಚಿಕ್ಕ ಮಕ್ಕಳಿಗೆ ಹೊಡೆದು ಹಿಂಸಿಸುವುದಿಲ್ಲ ಎಂದೇ, ಮೀಸೆ ಬೇಡವೆಂದು ಸುಪ್ರು ಆ ಕಡೆ ಕೈಚಾಚಿರಬಹುದು'' ಎಂದು ಮೀರಿ ನಂಜು ಮಾತಾಡಿದಳು

''ಅಥವಾ, ಅಪ್ಪನ ಮೀಸೆಯನ್ನು, ಗಂಡಸ್ತನ ಹೆಚ್ಚಿದ ಅಮ್ಮನಿಗೆ ಕೊಡಿಸಿದರೆ ಹೇಗಾಗಬಹುದೆಂದು ನೆನಸಿದನೋ ಏನೋ!'' ಎಂದು ಪ್ರತಿಯಾಡಿದೆ

''ನಮ್ಮ ಕುಟುಂಬದಲ್ಲಿ ಮೀಸೆಯ ಯೋಗ್ಯತೆಯ ಹೆಂಗುಸರೇ ಇಲ್ಲ; ಮೀಸೆಯ ರೀವಿ ಕಾಪಾಡಿಕೊಳ್ಳಲಾರದ ಗಂಡುಸರೂ ಇಲ್ಲ; ನನ್ನ ಮಾವನ ಕಡೆಯ ಗುಣವಿರಬಹುದು'' ಎಂದಳು ಮೀರಿ.

''ಕಾಪಾಡಿಕೊಳ್ಳಲೆಂದರೆ ಮೀಸೆಯೇ ಇಲ್ಲದ ಕುಟುಂಬವೇನೊ ನನ್ನ ಮಾವನದು, ಆದ್ದರಿಂದ ಆ ಸಮಸ್ಯೆಯೇ ಇಲ್ಲ, ಹುಟ್ಟಿದ್ದೆಲ್ಲ ನಿನ್ನಂಥ ಗಂಡು ಬೀರಿಗಳೇ ಆಗಿದ್ದಿರಬೇಕು'' ಎನ್ನುತ್ತಿರಲು—

—ಬಾಗಿಲ ಹೊರಗೆ ಆರ್ತನಾದ ಕೇಳಿಸಿತು ದಢಾರ್ರೆಂದು ತೆಂಗಿನ ಕಾಯಿ ಬಿದ್ದಂತಹ ಶಬ್ದವೂ ಆಯಿತು

ನಾನು ತರ್ಕ ನಿಲ್ಲಿಸಿ, ''ಯಾರೋ, ತೆಂಗಿನಕಾಯಿ ಬಿದ್ದು ಮೂರ್ಛೆ ಹೋದರು—ಅಥವಾ ತಿವಿಯಲ್ಪಟ್ಟು ಬಿದ್ದರು!'' ಎನ್ನುತ್ತ ಹೊರಗೆ ಓಡಿದೆ ಮೀರಿ ನನ್ನ ಹಿಂದೇ ಬಂದಳು

ಅಲ್ಲಿ ಕೆಳಗೆ ಕುಳಿತು, ದುರದುರನೆ ನೋಡುತಿದ್ದನು ಸುಪ್ರು ತನ್ನ ಬಾಯಿಗೆ ಕೈಯೊತ್ತಿ ಕಣ್ಮುಚ್ಚಿದ್ದನು ಮಾವ (ನನ್ನಮಾವ). ಮಾವನ ಪವಿತ್ರವಾದ ಕೈಬೆರಳುಗಳೆಡೆಯಿಂದ ಏನೋ ಕೆಂಪಗಿನ ದ್ರಾವಕ ಹರಿದಂತಿತ್ತು

''ಅಪ್ಪಾ!'' ಎಂದು ಕೂಗುತ್ತ ಮುಂದರಿದಳು ಮೀರಿ.

"ಕುಳಿತುಕೊಳ್ಳಿರಿ! ಏನು ಬಂದಿರಿ!'' ಎನ್ನುತ್ತ, ನಾನು ಗಾಬರಿಯಲ್ಲಿ ಉಪಚರಿಸಿದೆ

ಮಾವನು ಸಮಾಧಿಯಿಂದೆದ್ದು ಕಣ್ತೆರೆದು, ''ಮಗನೇ!'' ಎಂದನು.

''ಮಾವಾ!'' ಎಂದೆ

''ಮಗಳೇ!'' ಎಂದನು ಮಾವ

''ಅಪ್ಪಾ!'' ಎಂದಳು ಮೀರೆ

''ಈ ಮಗುವು ನಿನ್ನದೋ?''—ಪ್ರಶ್ನಿಸಿದನು ಮಾವ

''ಅಲ್ಲವೇ ಮತ್ತೆ, ಅಪ್ಪಾ!'' ಎಂದು ನೊಂದ ನುಡಿಯಿಂದ ಉತ್ತರ ವಿತ್ತಳು ಮೀರೆ

''ಮಗಳೇ, ಇವನು ರಾಕ್ಷಸ ಯಾನೆ ಹುಚ್ಚು ನಾಯಿ!'' ಎಂದನು ಮಾವ

''ಮಾವನವರು ಕೊಂಚ ವಿಶ್ರಮಿಸಿಕೊಳ್ಳಬೇಕು''! ಎಂದು ನಾನು, ಒಂದು ತರದ ಆನಂದ ಹೊಂದಿದರೂ, ಹೊರಗಿಂದ ಕನಿಕರದಿಂದ ವಿನಂತಿಸಿಕೊಂಡೆ.

''ಮಗನೇ, ಇಲ್ಲಿ ಒಂದು ನಿಮಿಷವೂ ಇರಲಾರೆ ಅಪಾಯವಿದೆ!'' ಎಂದನು ಮಾವ

''ನನಗರ್ಥವಾಗುವುದಿಲ್ಲ ಮಾವಯ್ಯ!'' ಎಂದೆ.

"ಮಗನೇ, ಅರ್ಥ ಬೇಡ. ಈ ಅನರ್ಥ ನೋಡಿ ತಿಳಿ ನಿನಗೆ ನನ್ನದು ಒಂದೇ ಒಂದು ಹಿತವಾದ!'' ಎಂದನು

"ಮಾವಾ .. ... . ?''

''ನನಗಡ್ಡ ಬರಬೇಡ ಮಗನೆ ಮನೆಯೊಳಗಿರುವಾಗ ನಿನ್ನ ಮೀಸೆಗಳ ಮೇಲೆ ಕೈಯಿಟ್ಟು ಮುಚ್ಚಿಕೊಂಡಿರಬೇಕು ಊಟದ ಸಮಯ ದಲ್ಲಿ ಮಾತ್ರ ಬಾಯಿ ತೆರೆಯಬೇಕು ''

''ಸಾಧ್ಯವಿಲ್ಲ ಮಾವ, ತಾವೇಕೆ ಹಾಗೆ ಹೇಳುವಿರಿ?''

''ಹಾಗೆ ಸಾಧ್ಯವಿಲ್ಲದಿದ್ದರೆ, ಇಂದು ಎಲ್ಲ ಯುವಕರೂ ಮುದುಕರೂ ಮಾಡುವ ಹಾಗೆ ಮೀಸೆಯೆಂಬ ವಸ್ತುವನ್ನೇ ತೆಗಿಸಿ, ಶುದ್ಧ ಮೀನಿನ ಮುಖದಂತೆ ಮುಖವಿರಿಸಿಕೊಳ್ಳಬೇಕು.''

"ಅದೂ ಸಾಧ್ಯವಿಲ್ಲ ಮಾವಾ!"

"ಎರಡೂ ಸಾಧ್ಯವಿಲ್ಲದಿದ್ದರೆ ಇದೋ—ಈ ಪರಿಣಾಮಕ್ಕೆ ಸಿದ್ಧನಾಗು!" ಎನ್ನುತ್ತ, ಮಾವಯ್ಯನು ತನ್ನ ಮೀಸೆಯ ಮೇಲೆ ಹಿಡಿದ ಕೈಯನ್ನು ತೆಗೆದನು.

ಎಡಬದಿಯ ಮೀಸೆ ಹೋಗಿತ್ತು, ತುಟಿ ಹರಿದಂತಿತ್ತು. ನೆತ್ತರು ಇಳಿಯುತಿತ್ತು!

ಮೀರೆ ಚೀರಿದಳು ನಾನು ಚೀರಲಿಲ್ಲ—ಸುಪ್ರು ಕಡೆಗೆ ನೋಡಿದೆ. ಸುಪ್ರುಮಹಾಶಯನು ಬಲಕೈ ಮುಷ್ಟಿಯಲ್ಲಿ, ತನ್ನ ಕೊಳ್ಳೆಯನ್ನು ಹಿಡಿದು, ಗೆದ್ದೆನೆಂಬ ಹೆಮ್ಮೆಯಿದ್ದರೂ, "ಯುದ್ಧವನ್ನು ಗೆದ್ದೆ --ಆದರೆ ಶಾಂತಿ?" ಎಂದಾಲೋಚಿಸುವಂತೆ ಕಂಡಿತು

ಮೀರೆಗೂ ಆಗಲೇ ಪೂರ್ಣ ಚಿತ್ರ ಕಂಡಿತು ಸುಪ್ರುವನ್ನೆತ್ತಿ ಮುದ್ದಾಡುವ ಬದಲು ಮರ್ದಿಸಿದಳು. ನಾನು ಮುಂದರಿದು ಬಾಲ ರಾಕ್ಷಸನನ್ನೆಳೆದು ಕಾಪಾಡಿದೆ

"ಮೀರಾ!"

"ಏನು?"–(ಬುಸುಗುಟ್ಟುತಿದ್ದಳು)

"ಚಿಕ್ಕ ಮಕ್ಕಳು ತಮ್ಮ ಮೃದುವಾದ ಎಳೆ ಕೈಗಳಿಂದ ನಾಲ್ಕು ಕುಡಿ ಮೀಸೆಗಳನ್ನೆಳೆದರೆ... .......''

ಮೀರೆ ಪುನಃ ಚೀರಿದಳು ಅಪ್ಪನು ಬರುವುದೇ ಅಪರೂಪವೆಂದಳು; ಬಂದರೆ, ಹೀಗೆ ಮೀಸೆ ಎಳೆದಾಡಬೇಕೆ ಎಂದು ನನ್ನನ್ನು ಪ್ರಶ್ನಿಸಿದಳು. ಮಕ್ಕಳಿಗೆ ಮೀಸೆಯೂ ಆಟದ ವಸ್ತುವೇ ಎಂದು ತಾನು ತಿಳಿಯಲಿಚ್ಛಿಸುವೆನೆಂದಳು. ಮತ್ತೆ, ಕೊನೆಯದಾಗಿ, ಸುಪ್ರುವಿನ ಅಪ್ಪನು (ನಾನು) ಆಗಾಗ್ಗೆ ಮುಖ ಮುಂದೆ ಮಾಡಿ ಅವನ ಲಕ್ಷ್ಯವನ್ನೆಳೆದು, ಆ ಎಳೆ ಬಾಲಕನಲ್ಲಿ ಮೀಸೆಯ ವಿಷಯ ಆಸೆ ಹುಟ್ಟಿಸಿ, ಇಂದಿನ ಈ ಪ್ರಗತಿಯಾಗಿರದೇಕೆ ಎಂದೂ ಶಂಕಿಸಿದಳು!

"ಮಗೂ!" ಎಂದನು ಮಾವ

"ಇಲ್ಲ ಅಪ್ಪಾ, ನಾನೀ ಚಾಂಡಾಲ (ಸುಪ್ರು)ನನ್ನು ಕ್ಷಮಿಸುವುದಿಲ್ಲ!"

“ನಾನವನನ್ನು ಮೊದಲೇ ಎತ್ತಿ ನೆಲಕ್ಕಪ್ಪಳಿಸಿದ್ದೇನೆ ಇನ್ನು ನಿನ್ನ ಶಿಕ್ಷೆಯು ಪ್ರತ್ಯೇಕ ಬೇಡ!” ಎಂದನು ಮಾವ. (ತೆಂಗಿನಕಾಯಿ ಬಿದ್ದಂತಹ ಶಬ್ದದ ಅರ್ಥ ನನಗೀಗ ತಿಳಿಯಿತು. ನನ್ನ ಮೀಸೆ ಕೀಳಲಾರದೆ ಸೋತು ಸುಪ್ರುವು, ನಾನೂ ಮೀರೆಯೂ ತರ್ಕದಲ್ಲಿದ್ದಾಗ ಹೊರಗೆ ಹರಿದು ಹೋದ ವನು, ಮಾವನು ಬರುತ್ತಲೇ ನೋಡಿ ಹಾರಿದನು. ಮಾವನು ಮುದ್ದಿನ ಮೊಮ್ಮಗನನ್ನೆತ್ತಿ ದೊರಗಾದ ಮೀಸೆಗಳನ್ನು ಅವನ ಮುಖಕ್ಕೊತ್ತುವಾಗ, ಬಹು ಕಾಲದ ಆಸೆ ನೆರವೇರಿತೆಂದು ಸುಪ್ರುಪ ತನ್ನ ಅಜ್ಜನ ಮೀಸೆಯನ್ನೆಳೆ ದನು )

“ಒಳ್ಳೆದಾಯಿತು!” ಎಂದಳು ಮೀರೆ ಮತ್ತೆ, ತನ್ನಪ್ಪನಿಗೆ ‘ಮುಖೋಪಚಾರ’ಗಳನ್ನೆಲ್ಲ ಮಾಡ ಹೋದಳು.

“ತವರು ಮನೆಯೆಂದರೆ ಹಾಗೆ ಸ್ತ್ರೀ ಯೆಂದರೆ ಹೀಗೆ!” ಎನ್ನುತ್ತ (ಮೆಲ್ಲಗೆ) ನಾನು, ‘ಸ್ತ್ರೀಯಾಗಿ ಹುಟ್ಟಬಾರದು!’ ಎಂದು ಪ್ರತಿಯೋರ್ವನು (‘ಳೂ’ ಸಹ) ದೇವರೊಡನೆ ಬೇಡಲಿಕ್ಕೆ ಕಾರಣವಿದೇ—ಈ ದೃಷ್ಟಿಭೇದ ಬಾರ ದಿರಲಿ ಎಂದು,—ಎನ್ನುತ್ತ, ಸುಪ್ರಸನ್ನನನ್ನು ಹಿಡಿದು, ಪೆಪರ್‌ಮಿರಾಯಿ ಕೊಡಲು ಪೇಟೆಗೆ ಹೋದೆ ಒಂದು ಕಣ್ಣನ್ನು ರಸ್ತೆಯ ಮೇಲೂ, ಮತ್ತೊಂದನ್ನು ಸುಪ್ರುವಿನ ಕೈಗಳ ಮೇಲೂ ಇರಿಸಿದೆ.

× × × ×

ಪ್ರತಿ ದಿನ ನಾನು ‘ಮೀಸೆ ಮತ್ತು ಅದರ ರಕ್ಷಣೆ’ ಎಂಬ ವಿಷಯದ ಮೇಲೆ ಸುದೀರ್ಘ ಗ್ರಂಥವನ್ನು ಬರೆಯಬೇಕೆಂದು ಆಲೋಚಿಸುತಿದ್ದೇನೆ ಆದರೆ, ದೇಶ ಸೇವೆಯಲ್ಲಿ ಇದೂ ಸೇರಲಾರದು, ಇದು ಸಾಹಿತ್ಯ ಸೇವೆಯೂ ಎನಿಸಲಾರದು ಎಂದು ಮೀರೆ ಎಚ್ಚರಿಸುತಿದ್ದಾಳೆ ಆದರೂ, ನಾನು ನೂರು ಸಲ ಲೇಖನಿ ಎತ್ತಿದುದುಂಟು, ನೂರೇ ಸಲ ಕೆಳಗಿಳಿಸಿದ್ದೇನೆ. ಸುಪ್ರು ಬೆಳೆಯಲಿ—ಮತ್ತೆ ಆರಾಮ ಖುರ್ಚಿಯಲ್ಲಿ ಕುಳಿತು, ನಾನು ಬಾಯಿಂದ ಹೇಳಿ, ಅವನ ಕೈಯಿಂದ ಬರೆಸುವೆನು—ಎಂದೂ ಒಂದು ತೀರ್ಮಾನವು ದೃಢಗೊಳ್ಳುತ್ತಲಿದೆ

# ೧೧. ಸ್ವದೇಶೀ ನೋವು.

"ಮನುಜಶರೀರವಿದೇನು ಸುಖ | ಇದೇನು ಸುಖ ||"

ಹಾಡು ನಿಂತಿತು "ಪ್ರಭು ಎಂಡ್ ಕಂಪೆನಿ"ಯ ಪಾಲುಗಾರನು, "ಹಾಡು ಸುಖವಾಗಿತ್ತಲ್ಲವೇ"? ಎಂಬರ್ಥದಲ್ಲಿ, ನನ್ನ ಅಭಿಪ್ರಾಯವನ್ನೇ ತಾನು ಪ್ರತಿಧ್ವನಿಸುತ್ತೇನೆಂದು ಖಚಿತವಿರುವಂತೆ, ಮೇಲ್ತುಟಿಯನ್ನು ಮಾತ್ರ ಅಗಲಿಸಿ ವಿಕಾರವಾಗಿ ನಕ್ಕು, ತಲೆಯಲ್ಲಾಡಿಸಿದನು ನಾನು ಕೆಳದುಟಿಯನ್ನು ಕೌಶಲ್ಯಪೂರ್ಣವಾಗಿ ಅಗಲಿಸಿ ಉತ್ತರ ಹೇಳಿ, ನಮಸ್ಕಾರ ಕೊಟ್ಟು ಕೆಳಗಿಳಿದೆ

ಮೀರೆ (ನನ್ನಾಕೆ). ಹಲ್ಲು ನೋವೆಂದು "ಡೆಂಟಿಲ್ಲೋ" ಬೇಕೆಂದಳು. ಎರಡು ವರ್ಷಗಳಿಂದ ಆಕೆಗೆ ನಿತ್ಯವೂ ಹಲ್ಲುನೋವು. ದಿನಂಪ್ರತಿ ಅರ್ಧಾಣೆಯ ಇಂಗು, ಕಾಲಾಣೆಯ ಮೆಣಸು, ಇಲ್ಲವೇ ನಶ್ಯ ಇವುಗಳನ್ನು ಆ ಹಲ್ಲಿನಲ್ಲಿಟ್ಟು, ಬಾಯಿ ತುಂಬ ಜೊಲ್ಲು ಸುರಿಸಿ, ತೊದಲ್ನುಡಿಯುತ್ತ ಸಮೀಪಕ್ಕೆ ಬರುವ ಮಗುವನ್ನು ತೊದಲ್ನುಡಿಯಿಂದಲೇ ಗದರಿಸಿ ಇಂಗಿನಲ್ಲಿ ಅದ್ದಿದ್ದ ಕೈಯಿಂದ ಹೊಡೆದು ಕಳುಹುತ್ತ,—ಅನ್ನ ಮಾತ್ರ ಬಡಿಸಿ ಹೊರಗೆ ಹೋದವಳಿನ್ನೂ ಬರಲಿಲ್ಲವೇಕೆಂದು ಆಶ್ಚರ್ಯಪಡುತಿದ್ದ ನಾನು "ಮೀರಾ" ಎಂದು ಹತ್ತು ಬಾರಿ ಕರೆದರೂ ಉತ್ತರ ಕೊಡದ ಕಾರಣ ಬೇಸರದಿಂದ ಚಿತ್ತ ಕದಲಿ ನಾಲಿಗೆಯು ಹೊರಳಿಬಿದ್ದು "ಮಾರೀ!" ಎಂದು ಶಬ್ದ ಹೊರಟರೂ ಕದಲದೆ ನನ್ನ ಜೀವನದಲ್ಲೊಂದು ಹಲ್ಲುನೋವಾಗಿ ಪರಿಣಮಿಸಿದ್ದಳು ಕೊನೆಗೆ ಆಕೆಯ ಹಿಂದಿನ "ಕನ್ವೆಂಟ್" ಶಾಲಾ ಗೆಳತಿಯೊಬ್ಬಳು "ಡೆಂಟಿಲ್ಲೋ" ಎಂಬ ದಂತಮಂಜನದ ಗುಣಗಳನ್ನು ಕೊಂಡಾಡಲು, "ಹದಿನಾರಾಣೆ! ಮೂವತ್ತೆರಡು ಹಲ್ಲುಗಳನ್ನುಳಿಸಿದ ಪುಣ್ಯ! ಒಮ್ಮೆ ತಂದು ಕೊಡಿರಿ!" ಎಂದಳು ಹೊರಟೆ "ಡೆಂಟಿಲ್ಲೋ" ಎಂಬುದು ನನಗೆ ತೀರ ಹೊಸ ಶಬ್ದ. ಅಂಗಡಿಯಲ್ಲಿ ವಿಚಾರಿಸುವಾಗ "ಡೆಲ್ಲೆಂಟೋ" ಅಥವಾ "ಲೆಂಡೆಂಟೋ" ಎಂದು "ಸ್ಪೂನರಿಸಂ" (ಇಂಗ್ಲೀಷು ಜಾತಿಯ ರೋಗ) ಜಾಡ್ಯ ತಟ್ಟಿದಂತೆ, ಬಾಯಿಯಲ್ಲಿ ಅದನ್ನೇ ಉಚ್ಚರಿಸುತ್ತ ಪ್ರಭು ಎಂಡ್

ಕಂಪೆನಿಯನ್ನು ಸೇರಿದೆ ಅಲ್ಲಿ ಗ್ರಾಮಫೋನ್ ಇಟ್ಟಿದ್ದರು. ಅದರಲ್ಲಿ ಆ ಹಾಡು; ಪಾಲುಗಾರನ ಮುಖದಲ್ಲಿ ಈ ನಗೆ! ನನಗೇನಾಗಬೇಡ!

"ಇದೇನು ಸುಖ!" ಎಂದು ಆ ಹಾಡುಗಾರನು ಮೂರು ಮೂರು ಬಾರಿಯೂ ಹಾಡಿದನು "ಮನುಜ ಶರೀರ ."ವೆಂದಾರಂಭಿಸಿದಾಗಲೇ ಮೀರೆಯ ಹಲ್ಲಿನ ನೆನಪಾಗಿ, ವೈರಾಗ್ಯ ಹುಟ್ಟಿ, ಕಣ್ಣು ಮುಚ್ಚಿಕೊಂಡಿದ್ದೆ. "ಇದೇನು ಸುಖ!" ಎಂದು ಮೂರು ಬಾರಿ ಪುನರೋಚ್ಚಾರವಾದ ಕೂಡಲೇ ಆತ್ಮಹತ್ಯೆಯ ವಿಚಾರ! ಆದರೆ ಇಂತಹ ಸಾಮಾನ್ಯ ವಿಷಯಗಳನ್ನು ಮೀರೆಗೆ ಹಲ್ಲುನೋವು ನಿಂತ ಮೇಲೆ ಆಲೋಚಿಸಬಾರದೇಕೆ ಎಂದು ಹೊಳೆಯುತ್ತಿದ್ದಂತೆ ಹಾಡಿನ ಮುಂದಿನ ಚರಣವಾರಂಭವಾಗಲು, ರಾಗದಲ್ಲಿ ವೈರಾಗ್ಯವು ಮರೆತು, ಹಾಡು ನಿಂತ ಮೇಲೆ ಪುನಃ ಮೂಡಿದರೂ, ಮೀರೆಗೆ ಹಲ್ಲಿರುವ ತನಕ ಆ ವಿಚಾರ ಸಲ್ಲದೆಂಬ ವಿವೇಕವೂ ಜತೆಯಲ್ಲಿ ಮೂಡಿತಾದ ಕಾರಣ, ಸುಖವಾಯಿತೆಂದು ನಕ್ಕ ಕಂಪೆನಿಯ ಪಾಲುಗಾರನಿಗೆ ಹಲ್ಲು ಕಿರಿದು ಉತ್ತರ ಸಲಿಸಿ ಕೆಳಗಿಳಿದುದು

ದಾರಿಯುದ್ದಕ್ಕೂ ಆ ಹಾಡೇ ಕಿವಿಯಲ್ಲಿ ಧ್ವನಿಸುತಿದ್ದಿತು. "ಮನುಜ ಶರೀರವಿದೇನು ಸುಖ !" ಬರೆದ ದಾಸನಾರೋ,—ಆತನಿಗೋ ಹೆಂಡತಿಗೋ ಹಲ್ಲು .. ...

ಮೀರೆಗೆ ಹಲ್ಲು ನೋವೊಂದು ಇಲ್ಲದಿದ್ದರೆ.. .....!

*  *  *  *  *  *

ಮೀರೆ ಜಗಲಿಯ ಮೇಲೆ ಕುಳಿತು ಅಂಗಳವನ್ನೇ ದಿಟ್ಟಿಸುತಿದ್ದಳು. ಬಾಯಲ್ಲಿ ನೀರು. ಸಮೀಪದಲ್ಲಿ ಇನ್ನೂ ನಡೆಯಲು ಕಲಿಯದ ಚಿಕ್ಕ ಮಗು; ಮಗುವಿಗೆರಡು ಕೈಗಳು, ಕೈಗಳಲ್ಲೈದು ಮೆಣಸುಗಳು! ವನಸ್ಪತಿ ಶಾಸ್ತ್ರ ಕಲಿಯುವ ಮೊದಲನೆ ಪಾಠವಾಗಿ ಮೆಣಸನ್ನೆತ್ತಿ, ಅದರ ದಿವ್ಯ ಗುಣಗಳನ್ನು ಪರೀಕ್ಷಿಸಲು ಕುಳಿತಿತ್ತೆಂದು ಎಣಿಸಿದೆ. ಆದರೆ ತಾಯಿಯೊಂದಿಗೆ ಕುಳಿತರೆ ಪಾಠಕ್ಕೆ ಆತಂಕವುಂಟಾಗಬಹುದೆಂದು ಅಂಗಳಕ್ಕೆ ಹಾರಲು ನಿಶ್ಚಯಿಸಿ, ಒಂದು ಕಾಲನ್ನು ಮುಂದುವರಿಸಿದುದೂ ತೋರಿತು. ಓಡಿ ಹೋಗಿ ಹಿಡಿದುಕೊಂಡೆ. ಮೆಣಸನ್ನು ಮೆಲ್ಲುಟಿಗೊತ್ತಿಬಿಟ್ಟಿತು. ಕ್ಷೌರಿಕನ ಬಾಳು ಅಂದೇ ಆ ಸ್ಥಳದಲ್ಲಿ ಕಾಳಗವಾಡಿದುದರಿಂದ, ಬೆಂಕಿ ಹಾಕಿ

ಸುಟ್ಟಂತಾಯಿತು ಮಗುವಿನ ಎರಡು ಕೈಗಳನ್ನೂ ನನ್ನ ಕೈಗಳಲ್ಲಿ ಹಿಡಿದು, ಮೇಣಸೆತ್ತಿ ಮಗುವೇ ಮೇಣಸಾದರೆ ಗತಿಯೇನೆಂದು ಬಗೆದು, ಮೇಣಸನ್ನು ಕಿತ್ತು ತೆಗೆದೆ. ಹೊಸ ಭಾವನೆಗಳು ಮೂಡುವಲ್ಲೇ ಭಂಗ ಬಂತೆಂದು ಕೂಗಿತು.

"ತಂದಿರಾ?" ಎಂದಳು ಮೀರೆ; "ತಂದೆ" ಎಂದೆ ನಾನು

"ಬ್ರಶ್?" ಎಂದಳು.

"ಯಾವ ಬ್ರಶ್?"

"ಪ್ರಿಫೊಲಿಟ್ ಟಿಕ್!"

"ಹಾಗೆಂದರೆ?"

"ಅದೇ,—ಹೆಸರು!"

"ಇನ್ನೊಮ್ಮೆ ಹೇಳು?"

"ಪ್ರಿಫೊಲಿಟ್ ಟಿಕ್!"

"ಪ್ರೊಲಿ-ಟಿಕ್-ಫಿಕ್?"

"ಅಲ್ಲ,—ಪ್ರಿಫೊಲಿಟ್ ಟಿಕ್"

"ಅದೂ ವಿದೇಶೀಯೆ?"

"ಯಾರಿಗೆ ಗೊತ್ತು? ನನ್ನ ಹಲ್ಲುನೋವು ವಿದೇಶೀಯಲ್ಲ!"

"ಆದರೆ"—

"ಅಯ್ಯೋ, ಒಂದು ತಂದು ಬಿಡಿರಿ!"

"ಅದರ ಹೆಸರು?"

"ಪ್ರಿಫೊಲಿಟ್ ಟಿಕ್."

"ಮೀರಾ, ಅದು ಉಚ್ಚಾರಕ್ಕೆ ಸ್ವಲ್ಪ ಕಷ್ಟ!"

"ಅಯ್ಯೋ—ಹಲ್ಲಿನ ನಷ್ಟ?—"

"ಆ ಹೆಸರು ಬರೆದುಕೊಡಬಾರದೇ?"

"ಹೆಚ್ಚು ಮಾತಾಡಬೇಡಿರಿ; ಮೊದಲೇ ಬೇಸರ ಅದರಲ್ಲೂ ಹಲ್ಲು ನೋವು; ಆ ಮೇಲೆ ಮಗುವಿನ ಕರಕರೆ; ಇನ್ನು ನಿಮ್ಮ......."

ಎರಡೇ ನಿಮಿಷಗಳಲ್ಲಿ ಪ್ರಭು ಎಂಡ್ ಕಂಪೆನಿಯನ್ನು ಮುಟ್ಟಿ, ಉಸಿರಿಗಾಗಿ ಕೊಂಚ ನಿಂತು, ಆ ಮೇಲೆ ಮೆಟ್ಟಿಲು ಹತ್ತಿಹೋದೆ.

"ಮನುಜ ಶರೀರದ ಸುಖ"ದಿಂದ ನಕ್ಕವನೇ ಮುಂದೆ ಬಂದು ಮತ್ತೊಮ್ಮೆ ನಗುತ್ತ, "ಏನು ಬಂದಿರಿ ಪುನಃ?" ಎಂದನು.

"ಪ್ರೊಕ್-ಲಿ-ಲಿಕ್-ಫಿಟ್!"

ಕಂಪೆನಿಯ ಪಾಲುಗಾರನು ತಟಸ್ಥ!

"ಇಲ್ಲವೆ?" ಎಂದು ನನ್ನ ಪ್ರಶ್ನೆ.

ಮೂರ್ಛೆ ತಿಳಿದು, "ನೀವು ಕೇಳಿದುದೇನು?" ಎಂದನು

"ನಾನೀಗ ಹೇಳಲಿಲ್ಲವೇ,—ಅದೇ!"

"ಅದೇನು?"

"ಪ್ರೊಲ್-ಕೆಟ್-ಫಿಟ್-ಇಕ್!"

"ಹಾಗೆಂದರೆ?"

"ಹಲ್ಲುಜ್ಜುವ ಬ್ರಶ್ಶು! ಅಷ್ಟೂ ತಿಳಿಯದೇ?"

"ಪ್ರಿಪ್ರೊಲಿಟ್ ಟಿಕ್ಕೇ? ಇದೆ, ಇದೆ. ಹಿ, ನೀವೆಂದುದೇನು?"

"ಕ್ರಯವೆಷ್ಟು?"

"ಹದಿನೆರಡಾಣೆ! ಪ್ರೊ-ಲಿಕ್-ಹಿ ಹಿ!—"ಬ್ರಶ್ ತಂದನು.

"ಇಗೊಳ್ಳಿರಿ! ಹದಿನೆರಡಾಣೆ!—ಪ್ರೊಲ್ .... ಹಿ ಹಿ!"

"ನಾಲ್ಕಾಣೆ ಹಿಂದೆ ಕೊಡಿರಿ" ಎಂದೆ

"ರೂಪಾಯಿ-ಪ್ರೊಲ್–ಹಿ ಹಿ—ಕೊಡಲಿಲ್ಲವಲ್ಲಾ-ಅದೇನು, ಪ್ರೊ-ಪ್ರೊಲ್—ಹಿಹಿ..... ..ನೀವ!" ಎಂದನು

ರೂಪಾಯಿ ಕೊಟ್ಟು ನಾಲ್ಕಾಣೆಯನ್ನು ಪಡೆದು, ಕೆಳಗಿಳಿದೆ "ಪ್ರೊಲ್ ಹಿಕ್—ಹಿಹಿಹಿ—ಏಳನೆಯ ತರಗತಿಯ ಹೆಂಡತಿಯ ನಾಲ್ಕನೆ ತರಗತಿಯ ಗಂಡ ತಿಳಿಯಿತೇ, ವೆಂಕೂ?" ಎಂದು ಪಾಲುಗಾರನು ನೌಕರನೊಡನೆ ಗಹಗಹಿಸಿ ನಗುತ್ತ ಹೇಳಿದುದು ಕೇಳಿಸಿತು.

ಮನುಜ ಶರೀರದ ಸುಖ!

ದಾರಿಯಲ್ಲೆಲ್ಲ ಮೀರೆಯ ಹಲ್ಲೊಂದೇ ಕಣ್ಣ ಮುಂದೆ! ಆ ಮೇಲೆ ಕಂಪೆನಿಯವನ "ಹಿ ಹಿ!" ಏಳನೆಯ ತರಗತಿಯ ಹೆಂಡತಿಯ ನಾಲ್ಕನೆ ತರಗತಿಯ ಗಂಡ!

ಸಿಗರೇಟು ಸೇದುವುದೊಂದು ನನ್ನ ಮಾನಸಿಕ ಅಬಲತನ. ಕೊಂಡು

ಕೊಂಡೆ ಬರುವಾಗ, ದಾರಿಯಲ್ಲಿ ಮೈದಾನು ದೊಡ್ಡ ಸಭೆ ಕೂಡಿದೆ. ವಿಚಾರಿಸಿದಾಗ,—ನಾರಾಯಣರಾಯರ ಭಾಷಣವೆಂದರು. ಜಿಲ್ಲೆಯಲ್ಲೆಲ್ಲ ಅಪ್ರತಿಮ ಭಾಷಣಗಾರರೆಂದು ಇವರ ಪ್ರಶಂಸೆ ಒಮ್ಮೆ ಈ ಪುರುಷ ಪುಂಗವನನ್ನು ನೋಡೋಣವೆನಿಸಿತು ಹೋದೆ

ಭಾಷಣಗಾರನ ಆವೇಶದ ಭರ! ದಟ್ಟವಾಗಿ ಜನರು ಮುತ್ತಿಕೊಂಡಿದ್ದರು. ಭಾಷಣಗಾರನ ಒಂದು ಶಬ್ದವಾದರೂ ಕೇಳುವಂತಿರಲಿಲ್ಲ. "ಯಾರು ಸ್ವಾಮಿ ಭಾಷಣ ಮಾಡುವವರು?" ಎಂದು ಎರಡು ಕೈಗಳನ್ನೂ ಇಬ್ಬದಿಯ ದಿಂಡರ ಭುಜಗಳ ಮೇಲಿಟ್ಟು ನೆಲದಿಂದ ಒಂದಡಿ ಮೇಲಕ್ಕೇರಿ ನಿಂತ ಒಬ್ಬ ಗಿಡ್ಡ ಮನುಷ್ಯನನ್ನು ಕೇಳಿದೆ. ಕೆಳಗಿಳಿಯದೆ, ನನ್ನನ್ನು ನೋಡದೆ, "ನಾರಾಯಣ!" ಎಂದನು "ಕ್ಷಮಿಸಿರಿ! ತಮಗೆ ಬೇಸರವಾಯಿತೇ?" ಎಂದೆ "ನಾರಾಯಣರಾವ್!" ಎಂದನು. ಅರಿವಿಲ್ಲದೆ ಇವನನ್ನು ಹೊತ್ತುಕೊಂಡು ನಿಂತ ದಿಂಡರು ಅವನನ್ನೂ ನನ್ನನ್ನೂ ನೋಡಿದರು. ಗಿಡ್ಡರಾಯನು ಫಕ್ಕನೆ ಕೆಳಗೆ ಹಾರಿದನು. ದಿಂಡರು ಅವನನ್ನು ಎರಡೂ ಕೈಗಳಿಂದ ಹಿಂದೆ ದೂಡಿ ಸೇಡು ತೀರಿಸಿಕೊಳ್ಳಲು, ನನಗೆ ಸ್ಥಳ ದೊರೆತು, ಒಳಗೆ ನುಸುಳಿ, ಬೆಚ್ಚಗಾಗಿ ನಿಂತುಬಿಟ್ಟೆ.

ಎಂಥ ಭಾಷಣ! ರೋಮಾಂಚನವಾಯಿತು!

" .... . ರಿಂದ ವಿಶ್ವನಿರ್ಮಾಣಕನ ಅಗೋಚರ ರೂಪವನ್ನು ಇದರಲ್ಲಿ ಕಾಣುತ್ತಿರುವೆವೊ ಎಂಬಂತೆ ಭೀಷಣವಾದಾ ಗಾಢಾಂಧಕಾರದಲ್ಲಿ ನಿರ್ವೀರ್ಯ ಜನಾಂಗವೊಂದು ಕಡು ಭೀತಿಯಿಂದ ಮೊರೆಯಿಟ್ಟುದಕ್ಕೆ ಅಪ್ರತ್ಯಕ್ಷವಾಗಿಯಾದರೂ.. .."

ಎಂಥ ಮಾತುಗಳು! ಮುಂದೆ,—

"ಬಣ್ಣವು ಕಪ್ಪು (ಕೈಚಪ್ಪಾಳೆ), ಕಸ್ತೂರಿಯೂ ಕಪ್ಪು (ಕೈಚಪ್ಪಾಳೆ); ಆದರೂ ಪರಿಮಳವೂ ಕಪ್ಪೇ? ಕೋಗಿಲೆಯು ಕಪ್ಪು; ಆದರೆ, ಸ್ವರವು ಕಪ್ಪೇ? (ಕೇಳಿರಿ, ಕೇಳಿರಿ ಎಂಬ ಕೂಗು); ಕೃಷ್ಣನು ಕಪ್ಪು; ಕಬೀರನು ಕಪ್ಪು; ಕನಕನು ಕಪ್ಪು; ಕಬ್ಬಿಣ ಕಪ್ಪು; ... . .

"ನಿಮ್ಮ ಕೂದಲು ಕಪ್ಪು!" ಎಂದಾವನೋ ಪುಂಡನು ನಡುವಿನಲ್ಲಿ ಕೂಗಿ ಬಿಟ್ಟನು. ಎಲ್ಲರೂ ಒಮ್ಮೆ ನಕ್ಕುಬಿಟ್ಟರು; ನನ್ನ ಎಡದಲ್ಲಿ ನಿಂತು

ಕೊಂಡಿದ್ದ ಅಧಿಕಾರಿಯೊಬ್ಬನಂತೂ ನಕ್ಕ ಭರಕ್ಕೆ ತಲೆಯ ಮೇಲಿನ ಹ್ಯಾಟು ಧೃತಿ ತಪ್ಪಿತು, ಆ ಮೇಲೆ ಗುಜುಗುಜು, ಮತ್ತೆ ಪುನಃ ನಿಶ್ಯಬ್ದ ಭಾಷಣವು ಮುಂದರಿಯಿತು.

"ಭಾರತೀಯರೇ! ದೃಢಮನಸ್ಕರಾಗಿ! ಈ ಚರಾಚರಾತ್ಮಕವಾದ ಪ್ರಪಂಚಕ್ಕೊಡೆಯನಾದವನೊಬ್ಬನೇ! (ಕೈಚಪ್ಪಾಳೆ) ಮನುಷ್ಯರೆಲ್ಲ ಅವನ ದಾಸರು ಆದರೆ ಈ ದಾಸರಿಗೂ ದಾಸರಿರುವರೆಂದರೆ ಅದೊಂದು ದುಃಖ ಪೂರ್ಣವಾದ ಆಶ್ಚರ್ಯ! ಆ ದಾಸರೇ ನಾವು!" (ಪುನಃ ಕೈಚಪ್ಪಾಳೆ,— "ದಾಸ"ರಿಂದ)

"ಎಕ್ಸಲ್ಲೆಂಟ್' ಎಂದನು, ನನ್ನ ಮುಂದೆ ನಿಂತಿರುವ ಮಹಾಶಯನೊಬ್ಬ ನೋಡಿದರೆ—ಸಂಭ್ರಮಯ್ಯ! ನಾನು "ನಾಲ್ಕನೆ ತರಗತಿಯ ಗಂಡ", ಆತನು "ಮೂರನೆ ತರಗತಿ"ಯವನೆಂದು ಬಲ್ಲೆ ಆದರೂ ನನಗಿಂತಲೂ ರಮ್ಯವಾಗಿ ಕೂಗಬಲ್ಲನು!

ಭಾಷಣ ಮುಂದರಿದಿತ್ತು —"ಎಲ್ಲವೂ ಸ್ವದೇಶೀ! ಅದೇ ಪ್ರತಿಯೋರ್ವನ ಧೃತವ್ರತವಾಗಬೇಕು! "

"ಎಗ್ಝೆಟ್ಲೆ!" ಎಂದೊಂದು ಉದ್ಗಾರ, ನನ್ನ ಹಿಂದಿನಿಂದ! ತಲೆ ತಿರುಗಿಸಿದರೆ—ದೊಡ್ಡ ಕುಂಬಳಕಾಯಿಯಷ್ಟು ದೊಡ್ಡ ಮುಖದಲ್ಲಿ ಅರ್ಧಾಣೆ ಗಾತ್ರದ ಕಣ್ಣುಗಳೆರಡನ್ನು ಉದ್ರೇಕದಿಂದ ತಿರುಗಿಸುತ್ತ ಯಾವನೋ ಒಬ್ಬ ಉತ್ಸಾಹಿಯು ತಳಮಳಿಸುತಿದ್ದಾನೆ! ' ಸ್ವದೇಶೀಭಕ್ತಿಯಿಂದ ಮುಖವೆಲ್ಲ ಕೆಂಪಗಾಗಿದೆ! ಬಾಯಿಯನ್ನು ಕಾಲಂಗುಲ ತೆರೆದು, ಇಹಲೋಕವನ್ನೆ ಮರೆತು, ಯಾವುದೋ ಒಂದು ಕಲ್ಪನಾರಾಜ್ಯದ ರಣರಂಗದಲ್ಲಿ ಭ್ರಮಣ ಮಾಡುತಿದ್ದಾನೆ; ಎಲ್ಲವೂ ಭಾಷಣಗಾರನ ಮಹಿಮೆ! ಭಾಷಣಗಾರನು ತನ್ನ ಈ ದೈವಿಕಶಕ್ತಿಯನ್ನರಿಯದೆ ಮುಂದರಿಸಿದನು:—

" ...ಬಟ್ಟೆ ಸ್ವದೇಶೀ; ಟೊಪ್ಪಿ ಸ್ವದೇಶೀ; ಪಾದರಕ್ಷೆ ಸ್ವದೇಶೀ; ಸಾಬೂನು ಸ್ವದೇಶೀ, ಲೇಖನಿ ಸ್ವದೇಶೀ, ಕೊಡ ಸ್ವದೇಶೀ, ಟೂತ್ ಪೌಡರ್ ಸ್ವದೇಶೀ, ಬ್ರಶ್ ಸ್ವದೇಶೀ. ...,"

ನಿಮಿಷಾರ್ಧದಲ್ಲಿ ನನ್ನ ಕೈಯೊಳಗಿನ ಬ್ರಶ್ಶನ್ನು ಕಿಸೆಗೆ ತುರುಕಿಸಿಬಿಟ್ಟೆ. ಎಲ್ಲರೂ,—ನನ್ನನ್ನು ಕಳ್ಳನೆಂದು ಬಗೆದು ನೋಡುತ್ತಿರುವರೊ

ಎಂದು ಸುತ್ತಲೂ ನೋಡಿದೆ ಇಬ್ಬರು, ಕಂದು ಬಣ್ಣದ ತಮ್ಮ ಟೊಪ್ಪಿಗಳನ್ನು ತೆಗೆಯುತಿದ್ದರು, ಒಬ್ಬನು ಸಿಗರೇಟನ್ನು ಮುಂದಿನವನ "ಟ್ವೀಡ್" ಅಂಗಿಗೆ ತಿಕ್ಕಿ ನೊಂದಿಸುತಿದ್ದನು ನನಗೆ, ನನ್ನ ಕೈಯೊಳಗಿನ ಸಿಗರೇಟಿನ ನೆನಪಾಯಿತು ಮೆಲ್ಲನೆ ಹಿಂದಕ್ಕೊಯ್ದೆ—"ಡೆಮಿಟ್—ರಾಸ್ಕಲ್—ಆಯ್ಯೋ!—" ಒಂದು ಆರ್ಭಟಿ ಹೊರಟಿತು,—ನನ್ನ ಕಿವಿಯ ಬಳಿಯಲ್ಲಿ!-ಅದನ್ನನುಸರಿಸಿ ನನ್ನ ಬೆನ್ನಿಗೆ ತೆಂಗಿನಕಾಯಿಯ ಗಾತ್ರದ ಕಬ್ಬಿಣದ ಗುಂಡನ್ನು ಬಡೆದ ಹಾಗಾಯಿತು ಹಿಂದಿರುಗಿ ನೋಡಿದೆ. "ಎಗ್ಝಿಟ್ಲಿ" ಎಂದು ಒಂದರೆ ಕ್ಷಣದ ಹಿಂದೆ ಕೂಗಿದವನು ರೋಷೋನ್ಮತ್ತನಾಗಿದ್ದಾನೆ! ಮೂಗಿನ ಸೊಳ್ಳೆಗಳು ಅರಳಿವೆ, ಕಣ್ಣುಗಳು ಫಕ್ಕನೆ ದೊಡ್ಡದಾಗಿ, ಮುಖದ ಅರ್ಧ ಪ್ರದೇಶವನ್ನು ಆಕ್ರಮಿಸಿವೆ, ನನಗೆ ಗುದ್ದು ಹೊಡೆದ ಕೈಯು ಪುನಃ ಎರಡಡಿ ಮೇಲಕ್ಕೆ ಹಾರಿದೆ! ಇಷ್ಟೆಲ್ಲವೂ ಮಿಂಚಿನ ವೇಗದಲ್ಲಿ ನಡೆದು ಹೋಯಿತೆನ್ನುವಾಗ,—ಮಿಂಚಿನಂತೆಯೇ ಬಂತು ಆ ಕೈಮುಷ್ಟಿ; ನನ್ನ ಮೂಗಿನ ತನಕ ಬಂದುದನ್ನು ನೋಡಿದೆ,—ಅಲ್ಲೇ ಎಲ್ಲಿಯೋ ಮಿಂಚು ಬಡೆದಂತಾಯಿತು ಆ ಮೇಲೆ—

ಕಿವಿಯಲ್ಲಿ ಬಿರುಗಾಳಿ—ಕಣ್ಣ ಮುಂದೆ ಕಾಳ್ಗತ್ತಲೆ—ದೊಡ್ಡ ನೆರೆ—ಅದರಲ್ಲೆಲ್ಲರೂ ತೇಲಿದಂತೆ—

* * * * * *

"ಎಗ್ಝಿಟ್ಲಿ-ಎಗ್ಝಿಟ್ಲಿ-ಡೆಮಿಟ್-" ಎಂದಂತಾಯಿತು! ಎದೆ ಜುಮ್ಮೆನಿಸಿ ಭಯದಿಂದ ಕಣ್ಣು ತೆರೆದೆ! ಎಂಥ ನೋಟ!—

ಕಣ್ಣಮುಂದೆ ಆಕಾಶ, ಸುತ್ತಲೂ ಹತ್ತಿಪ್ಪತ್ತು ಮುಖಗಳು! ಗಾಳಿ ಬೀಸುತಿದ್ದಾರೆ—ನೀರು ಚಿಮುಕಿಸುತಿದ್ದಾರೆ—ಕೈ ಒತ್ತುತಿದ್ದಾರೆ-ಮತ್ತು-

ಬಾಯಿಯ ಮೇಲೆ ಕಾಲು ಮಣ ಭಾರದ ಹಲಗೆಯನ್ನು ಒತ್ತಿಟ್ಟಂತಾಗಿದೆ, ಹಲ್ಲುಗಳು ನೋಯುತ್ತಿವೆ ಪರೋಪಕಾರಿಯೊಬ್ಬನು ಒಂದು ಕರವಸ್ತ್ರವನ್ನು ನನ್ನ ಮುಖಕ್ಕೆ ಒತ್ತಿಟ್ಟಿದ್ದಾನೆ ನಾನು ಮಲಗಿದ್ದೇನೆ!

ಅವನ ಕೈಯನ್ನು ತೆಗೆದು, ಎದ್ದು ಕುಳಿತುಕೊಂಡೆ! "ನಿಮ್ಮ ಕರವಸ್ತ್ರ ಇಗೊಳ್ಳಿರಿ!" ಎಂದನು ಕರವಸ್ತ್ರವೆಲ್ಲ ನೆತ್ತರಿನಲ್ಲಿ ತೋಯ್ದು ಹೋಗಿದೆ ಎಲ್ಲವೂ ನನ್ನ ಹಲ್ಲುಗಳ ನೆತ್ತರಂತೆ!

ನೂರಾರು ಮುಖಗಳಿಂದ ನೂರಾರು ಬಗೆಯ ಮಾತುಗಳು ಎಲ್ಲವೂ ಸ್ಪಷ್ಟವಾಗಿ ಕೇಳುವಂತಿಲ್ಲ. ಆದರೂ ಸಾರಾಂಶವಿಷ್ಟು —

ಆ ಉದ್ರೇಕಗೊಂಡ ಸ್ವದೇಶೀ ಭಕ್ತನ ತೊಡೆಗೆ ನನ್ನ ಸಿಗರೇಟಿನ ಕೊನೆಯ ಬೆಂಕಿ ತಗಲಿತೆಂಬ ಕೋಪದಲ್ಲಿ—ಆ ಬೆಂಕಿ ವಿದೇಶೀ ಸಿಗರೇಟಿನಿಂದ ಬಂದುದೆಂಬ ಕೋಪವು ಬೆರೆತು, ಉಲ್ಬಣವಾಗಿ, ಆ ಬೆಂಕಿಯನ್ನು ಊದಲು ಸಹಾಯ ಮಾಡಿದ ಬಾಯಿಗೊಂದು ಗುದ್ದು ಕೊಟ್ಟನಂತೆ, ಸಿಗರೇಟನ್ನು ಆತನ ತೊಡೆಯ ಬಳಿಗೆ ಕರೆದು ತಂದ ಕೈಯನ್ನೂ ಮುರಿಯುವ ಆಲೋಚನೆಯೂ ಇತ್ತಾದರೂ, ಮೊದಲನೆ ಗುದ್ದಿನಲ್ಲಿ ಉರುಳಿದ ನಾನು ಇನ್ನು ಏಳುವಂತಿಲ್ಲವೆಂದು ನೆನೆದು, ಹೆಣದ ಕೈಯನ್ನು ಮುರಿದು ಪುರುಷಾರ್ಥವಿಲ್ಲವೆಂದು ಗ್ರಹಿಸಿ,—ಆಗಲೇ ಪಾಸಿಕಂಭದ ನೆನಪಾಗಲು,—ಸ್ವದೇಶೀ ಪ್ರೇಮಿಗಳಿಗೆ ಆ ಕಂಭಗಳೊಡನೆ ಕೆಲಸವಿಲ್ಲವೆಂದು ಹೊಳೆದೋ ಏನೋ—ನಿಮಿಷಾರ್ಧದಲ್ಲಿ ಅಲ್ಲಿಂದ ಮಾಯವಾದನಂತೆ!

ಮಹಾಸಾಹಸಪಟ್ಟು ತಂದ ಆ ಬ್ರಶ್ಶು ಇರಲಿಲ್ಲ! ಅವರಿವರ ಉಪಚಾರದ ಮಾತುಗಳಿಗೆಲ್ಲ ಒಂದೇ ಬಾಯಾಗಿ ಉತ್ತರ ಸಲಿಸಿ, ಮುಖಕ್ಕೊಂದು ಕೈಯನ್ನು ಅಡ್ಡವಿಟ್ಟು, ಪ್ರಯಾಸದಿಂದ ಮನೆ ಸೇರಿದೆ

ಮನೆ ಜಗಲಿಯ ಮೇಲೆ ಹೊಸ ನಾಟಕ—ಹೊಸ ಸೀನ್! ಮಗುವು "ಡೆಂಟಿಲ್ಲೊ" ನಳಿಗೆಯನ್ನೆತ್ತಿ, ತನ್ನ ಕೈಗಳಿಂದ ಮನದಣಿಯೆ ಒತ್ತಿ, ಹೊರಗಿಳಿದ ಅಂಟನ್ನೆಲ್ಲ ನಿಷ್ಪ್ರಯೋಜಕವಾಗಗೊಡದೆ ಜಗಲಿಯ ಮೇಲೆ ಆರೇಳು ನಕಾಶೆಗಳನ್ನೂ, ಮೈ ಮೇಲೆ ಮುಖದಿಂದ ಕಾಲು ತನಕ ಲೇಪವನ್ನೂ ಮಾಡಿ ತನ್ನ ಪುಟ್ಟ ತುಟಿಗಳನ್ನು ಒತ್ತಿ ಹಿಡಿದು, ಬರಿದಾದ ಆ ನಳಿಗೆಯನ್ನು ದಿಟ್ಟಿಸುತ್ತಿದೆ ಅಪರೂಪವಾದ ಚಿತ್ತೈಕಾಗ್ರತೆ! ಅದಕ್ಕೆ ಭಂಗವನ್ನುಂಟುಮಾಡಲು ಅಲ್ಲಾರೂ ಇಲ್ಲ! ವನಸ್ಪತಿಶಾಸ್ತ್ರವನ್ನು ಕಲಿಯುವ ಸಂದರ್ಭ ತಪ್ಪಿದರೂ ಈ ವಿಜ್ಞಾನ ಪ್ರಯೋಗದ "ಸುಸಂದರ್ಭವೇ ಆದಕ್ಕೆ ಒದಗಿದೆ. ಹದಿನೆರಡಾಣೆಯ ಒಂದು ನಳಿಗೆಯಿಂದ ಎಷ್ಟೋ ಲಾಭ!

ನನ್ನನ್ನು ನೋಡುತ್ತಲೇ ಹಲ್ಲು ಕಿರಿದು, ಆ ನಳಿಗೆಯನ್ನೆತ್ತಿ ನನಗೆ ತೋರಿಸುತ್ತ ತನ್ನ ಸಂತೋಷವನ್ನು ವ್ಯಕ್ತ ಪಡಿಸಿತು. ನನ್ನ ಹಲ್ಲು ನೋವನ್ನು ಮರೆತು "ಮೀರಾ!" ಎಂದು, ಉಸಿರೆಲ್ಲ ಖರ್ಚಾಗುವಂತೆ

ಕೂಗಿ,—ನದಿಯ ಬಳಿಯಲ್ಲಿ ಆಚೆ ದಡದ ಕಡೆಗಿರುವ ದೋಣಿಯನ್ನು ಕಾದು ನಿಂತ ಹಾಗೆ ನಿಂತೆ

ಹತ್ತು ನಿಮಿಷಗಳ ಮೇಲೆ ಮಿಾರಾದೇವಿಯು ದರ್ಶನ ಕೊಟ್ಟಳು. ನನಗಿಂತಲೂ ಚುರುಕು ಮಿಾರೆ! ಬಂದವಳೇ ನನ್ನನ್ನು ನೋಡುವ ಮೊದಲೇ ಮಗುವನ್ನು ನೋಡಿ, "ಅಯ್ಯೋ—ಕೆಟ್ಟ ಮಗು—ಇದೇನು?'' ಎಂದು ಒದರುತ್ತ, ಮಗುವನ್ನೆತ್ತಿ, ಅದರ ಬೆನ್ನ ಮೇಲೆ ಕೇವಲ ಅರ್ಧ ಕ್ಷಣದೊಳಗೆ, ವಿದ್ಯುಚ್ಛಕ್ತಿಯ ಕೈಗಳಂತೆ ಹತ್ತಿಪ್ಪತ್ತು ಪೆಟ್ಟುಗಳನ್ನು ಹೊಡೆದಳು! ನೋವಾದ ಕೂಡಲೇ ಅಳಬೇಕೆಂಬ ನಿಸರ್ಗ ಜ್ಞಾನವಿದ್ದ ಆ ಮಗು, ಕಲ್ಮರಗಳೆಲ್ಲ ನೀರಾಗುವಂತೆ ಕೂಗಿತು

ಆ ಮೇಲೆ, "ಬ್ರಶ್ ಎಲ್ಲಿದೆ?'' ಎಂದು,—ಆ ಕೂಗುವ ಮಗುವಿನ ಮುಖದ ಮೇಲಿಂದ ಕೇಳಿದಳು ಮಿಾರೆ

"ಬ್ರಶ್ ?!?!?! ಯಾವ ಅಂಗಡಿಯಲ್ಲೂ ಬ್ರಶ್—ಬ್ರಶ್ ಇಲ್ಲವೇ ಇಲ್ಲ—'' ಎಂದೆ

"ಈ ದೊಡ್ಡ ಶಹರಿನಲ್ಲಿ ಬ್ರಶ್ ಇಲ್ಲವೇ? ಹಾಳಾಗಲಿ, ಈ ಊರು'' ಎಂದಳು

"ಒಂಭತ್ತು ವರ್ಷಗಳ ಹಿಂದೆ ಬಂದ ದೊಡ್ಡ ನೆರೆಯಲ್ಲೂ ಅಳಿಯದ ಊರಿದು, ಬರೀ ಒಂದು ಬ್ರಶ್ ಇಲ್ಲದ ಮಾತ್ರದಿಂದ ಹಾಳಾಗುವುದೆಂಬುದನ್ನು ನಾನು ನಂಬುವುದಿಲ್ಲ!'' ಎಂದೆ

"ಮತ್ತೆ,—ಒಂದು ಬ್ರಶ್ ಇಲ್ಲವೆಂದರೇನು?—ಕುತ್ತಿಗೆಗೆ ಸುತ್ತುವ ಟ್ಟಾ ಇದೆ—ತಲೆ ಬಾಚಲು ಬಾಚಣಿಗೆ ಇದೆ—ಹಚ್ಚಲು ಬ್ರಿಲ್ಲೈಂಟೈನುಗಳಿವೆ—ಕ್ಷೌರಕ್ಕೆ ಕತ್ತಿಗಳಿವೆ—ಎಲ್ಲವೂ ಒಂದಲ್ಲ, ನೂರು ಬಗೆಯಲ್ಲಿವೆ. ಬ್ರಶ್ ಮಾತ್ರ ಒಂದೇ ಒಂದು ಇಲ್ಲವೇ? ಹಲ್ಲುಗಳಿದ್ದ ಊರಿಗೆರಡು ಬ್ರಶ್ಯುಗಳಿಲ್ಲದಿದ್ದರೆ—ಅದೊಂದು ಊರೇ?''

"ಹಾಗಲ್ಲ ನಮಗೆ ಹಲ್ಲುಗಳಿವೆಯೆಂಬುದರ ವಿಷಯವಾಗಿ ವಿದೇಶೀಯರಿಗೆ ಸಂದೇಹವಾಗಹತ್ತಿದೆಯೆಂದು ತೋರುವುದು. ಇಲ್ಲಿಂದಲೂ ಯಾರೂ ಆ ವಿಷಯವಾಗಿ ಪತ್ರ ಬರೆದಿಲ್ಲವಾಗಿರಬಹುದು!'' ಎಂದು ಸೂಚಿಸಿದೆ.

"ಸ್ವದೇಶಿ ಬ್ರಶ್ಶನ್ನಾದರೂ ತರಬಾರದೇ?" ಎಂದಳು

ಸ್ವದೇಶೀ ಬ್ರಶ್ಶುಗಳು ಒಂದೆರಡು ಬಗೆ, ಗಟ್ಟಿಮುಟ್ಟಾಗಿಲ್ಲದಿದ್ದರೂ ಬಾಲಹೆಜ್ಜೆಗಳನ್ನಿಟ್ಟು ಪೇಟೆಗೆ ಬಂದಿವೆಯೆಂದು ಕೇಳಿದ್ದೆನಾದರೂ, ಕಿವಿಯಲ್ಲಿನ್ನೂ "ಎಗ್ಝಿಟ್ಲ—ಎಗ್ಝಿಟ್ಲ" ಎಂದು ಧ್ವನಿಯಾಗುತ್ತಲೇ ಇತ್ತಾದ ಕಾರಣ, ಬ್ರಶ್ಶಿಗಾಗಿ ಪೇಟೆಗೆ ಹೊರಡುವ ಮನಸ್ಸಿಲ್ಲದೆ,—"ಇಲ್ಲ ಮೀರಾ! ಸ್ವದೇಶೀ ಬ್ರಶ್ಶುಗಳಿಲ್ಲ" ಎಂದು ಸುಳ್ಳನ್ನೇ ಹೇಳಿದೆ

"ಅಯ್ಯೋ, ಆ ತನಕ ಈ ಹಲ್ಲು,—!" ಎಂದಳು

"ಹೆದರಬೇಡ ನಿನ್ನ ಹಲ್ಲು ಹೋದರೆ ನನ್ನ ಹಲ್ಲುಗಳನ್ನು ನಿನಗಾಗಿಯೇ ಕೊಡುವೆನು!" ಎಂದು ವಿನೋದಕ್ಕಾಗಿ ಹೇಳಿ ನಗಲು ತುಟಿಗಳನ್ನಗಲಿಸಲು,—

"ಇದೇನು, ನಿಮ್ಮ ಮುಂಭಾಗದ ಎರಡು ಹಲ್ಲುಗಳು—ಇಲ್ಲ?—ಅಯ್ಯೋ ತುಟಿಗಳೂ, ಜಜ್ಜಿ, ಬಾತುಕೊಂಡಿವೆ! ನಾನು ಈ ತನಕ ನೋಡಲೇ ಇಲ್ಲ! ನೀವು ಮುಖದ ಮೇಲಿನ ಕೈಯನ್ನು ತೆಗೆದುದೂ ಇಲ್ಲ!" ಎನ್ನುತ್ತ, ಗಾಬರಿಗೊಂಡು, ಕೈಯಲ್ಲಿ ಅಳುತ್ತ ಕಸರತ್ತಾಡುವ ಮಗುವನ್ನು ಕೆಳಗಿರಿಸಿ, ನನ್ನ ಮುಖದ ಶುಶ್ರೂಷೆಗೆ ಬಂದಳು. ಆಕೆಯೊಡನೆ, ರಹಸ್ಯವನ್ನು ಹೊರಗೆಡಹಬಾರದೆಂದು ಯೋಚಿಸಿದುದು, ನಿಷ್ಫಲವಾಯಿತು.

ನಾಚಿಕೆ—ರೋಷ—ದುಃಖಗಳಿಂದ ಹೃದಯವು ತುಂಬಿರಲು,—ಮಾತೆತ್ತಲಾರದೆ, ಆಕೆಯನ್ನೇ ದಿಟ್ಟಿಸಿ ನೋಡಿದೆ ಆ ಮೇಲೆ ಮೆಲ್ಲನೆ ಹೇಳಿದೆ:—

"ಮೀರಾ! ಬೈಬಲಿನಲ್ಲಿ 'ಹಲ್ಲಿಗೆ ಹಲ್ಲು'(a tooth for a tooth) ಎಂದು ವಚನವಿದೆ ಅದರರ್ಥವು ಮುಯ್ಯಿಗೆ ಮುಯ್ಯಿ ಎಂದಿರುವುದಾದರೂ, ಇದೀಗ ನವೀನ ಅರ್ಥವೊಂದನ್ನು ಕಲಿತುದು!" ಎನ್ನುತ್ತ, ಮೈದಾನಿನಲ್ಲಿ ನಡೆದುದನ್ನು ವಿವರಿಸಿದೆ

ಆಕೆಯ ಮನಸ್ಸಿನ ಭಾವಗಳೇನೋ,—ನಾನರಿಯೆ ಕಣ್ಣುಗಳು ಒದ್ದೆಯಾದಂತೆ ತೋರಿತೆಂದು, "ಆ ಕಣ್ಣೀರ ಹನಿಗಳನ್ನು ಮುತ್ತಿಡಲಾರೆ; ನನ್ನ ತುಟಿಗಳು ವಾಸಿಯಾಗುವ ತನಕ ಅಳಬೇಡ" ಎಂದು ಮೃದುವಾಗಿ ಆಕೆಯ ಕಿವಿಯಲ್ಲುಸುರುತ್ತ—

"ಬ್ರಶ್ಶು ಸ್ವದೇಶಿಯಾಗಿ ದೊರೆಯುವುದಾದರೂ ಶುದ್ಧ ಸ್ವದೇಶಿಯೆ

ನಿಸಬೇಕಾದರೆ ಮಿತವ್ಯಯದ ತತ್ವವೂ ಇರಬೇಕು. ಮೇಲಾಗಿ, ನಿಸರ್ಗ ದೇವತೆಯು ದಾನ ಮಾಡಿದ ಬ್ರಶ್ಯುಗಳಿರುವಾಗ ಇತರ ಬ್ರಶ್ಯುಗಳನ್ನು ಹುಡುಕುವುದು ಸರ್ವತೋಮುಖವಾಗಿ ತಪ್ಪು. ಸದ್ಯಃ ಬೇವಿನಮರ ದಿಂದೊಂದು ಚಿಕ್ಕ ಕಡ್ಡಿಯನ್ನು ಕಡಿದು ತೆಗೆದು, ಅಗಿದು, ಹಲ್ಲುಜ್ಜಿದರೆ ಅದೇ ಪೌಷ್ಟಿಕ ರಸಾಯನ, ಮರಕ್ಕೂ ತನ್ನಿಂದ ಲೋಕೋಪಕಾರವಾಗು ತ್ತಿದೆಯೆಂದು ಸಂತೋಷವಾಗದಿರದು!'' ಎಂದೆ.

ಮೀರೆಯು ಸಿಡಿದೇಳಲಿಲ್ಲ; ಅದೇ ಆಕೆಯ ಸಮ್ಮತಿ

* * * * * *

ಮೊನ್ನೆ ಮೈದಾನಿಗೆ ಕ್ರಿಕೆಟ್ ಪಂದ್ಯಾಟ ನೋಡಲು ಹೋಗಿರಲು, ನನ್ನ ಬಳಿಯಲ್ಲೇ ''ಎಗ್ಝಿಟ್ಲ—ಎಗ್ಝಿಟ್ಲ'' ಎಂದ ಹಾಗಾಯಿತು ಸರಕ್ಕನೆ ಮುಖ ತಿರುಗಿಸಿದೆ ಆ ಭರಕ್ಕೆ ಆ ವ್ಯಕ್ತಿಯೂ ಮುಖ ತಿರುಗಿಸಲು,— ಸರಿ, ನಾವೇ; ನಾನು ಮತ್ತೆ ಆ ರಾಯ—ಅಂದು ನನ್ನ ಹಲ್ಲುಗಳೊಂದಿಗೆ ಪಂದ್ಯಾಟವಾಡಿದಾತ!

ನನ್ನನ್ನು ನೋಡುತ್ತಲೇ ಆತನ ಮುಖ ಕಪ್ಪಿಟ್ಟಿತು ''ತಾವು— ತಾವ'' ಎಂದನು.

''ಅಹುದು, ನಾನೇ—'' ಎಂದೆ

''ನನ್ನನ್ನು ಕ್ಷಮಿಸಬೇಕು. ನನಗೆ ಯಾವಾಗಲೂ 'ಎದುರು ಕೋಪ,' ಕ್ಷಮಿಸಬೇಕು'' ಎಂದನು

"ಎದುರು ಕೋಪದವರು ಎದುರು ಹೊಡೆಯಬಾರದು ಹಲ್ಲುಗಳೆ ರಡನ್ನು ಡಾಕ್ಟರ್‌ರಲ್ಲಿ ಇಡಿಸಿದೆ" ಎಂದೆ.

''ಎರಡೇ? ನನ್ನ ನಾಲ್ಕು ಹಲ್ಲುಗಳನ್ನು ಡಾಕ್ಟರರೇ ಇಟ್ಟರು'' ಎಂದನು.

''ತಮ್ಮ ಹಲ್ಲು ಹೇಗೆ ಹೋಯಿತು?'' ಎಂದು ಪ್ರಶ್ನಿಸಿದೆ

''ನನ್ನಂತೆಯೇ ಎದುರು ಕೋಪದವನೊಬ್ಬನು ಭೇಟಿಯಾದನು!'' ಎಂದನು.

"ಆದರೆ,—ತಾವ ವಿದೇಶೀ ಸಿಗರೇಟನ್ನೆಳೆದುದು ಮಹಾಪಾಪ, ಬೀಡಿ ಯಾಗಿದ್ದರೆ ನನಗೆ ಅಷ್ಟು ಕೋಪ ಬರುತ್ತಿರಲಿಲ್ಲ!'' ಎಂದನು.

"ತಾವು ಮೇಲೆ ಖಾದಿ ಶರ್ಟನ್ನು ಹಾಕಿದ್ದರೂ ಕೆಳಗೆ ವಿದೇಶೀ ಧೋತಿಯನ್ನುಟ್ಟುಕೊಂಡಿದ್ದಿರಿ ಅದು ಕಾರಣವೇ ಸಿಗರೇಟಿನ ಬೆಂಕಿಯು ಸಮೀಪಕ್ಕೆ ಬರುವಷ್ಟರಲ್ಲೇ ವಸ್ತ್ರವು ಸುಟ್ಟು, ಬೆಂಕಿಗುಳ್ಳೆ ಎದ್ದಿರಬೇಕು. ತಾನು ಸ್ವತಹ ವಿಲಾಯತಿ ಧೋತಿಯನ್ನುಟ್ಟುಕೊಂಡು, ಸ್ವದೇಶೀಪ್ರೇಮದ ಹೆಸರಲ್ಲಿ ನನ್ನ ಮೇಲೆ ಬಲಪ್ರಯೋಗ ಮಾಡಿದಿರಾದ ಕಾರಣ, ನನಗಿಂತಲೂ ದ್ವಿಗುಣಿತ ಪಾಪವನ್ನು ನೀವು ಮಾಡಿದಂತಾಯಿತು!" ಎಂದೆ.

"ಅದಕ್ಕಾಗಿಯೇ, ಮೊದಲಾಗಿಯೇ ನಿಮ್ಮಲ್ಲಿ ಕ್ಷಮಾಯಾಚನೆ ಮಾಡಿದೆನು ನೋಡಿರಿ, ಈಗ ಖಾದಿಯನ್ನೆ ಉಟ್ಟುಕೊಂಡಿದ್ದೇನೆ!" ಎಂದನು

"ಸರಿ, ನೋಡಿರಿ,—ನನ್ನ ಕೈಯಲ್ಲಿ ಬೀಡಿ ಮಾತ್ರವಿದೆ!" ಎನ್ನುತ್ತ, ಒಂದನ್ನು ಹೊರಗೆ ತೆಗೆದು ಬೆಂಕಿ ಹತ್ತಿಸಿದೆ.

"ಎಗ್ಝೆಟ್ಲಿ!" ಎಂದು ಉದ್ಗಾರ ತೆಗೆದನು

"ಇನ್ನೊಂದು ಚಿಕ್ಕ ವಿನಂತಿ ತಾವು, ಕನ್ನಡ ಮಾತಾಡುವಾಗ 'ಎಗ್ಝೆಟ್ಲಿ' ಎಂಬ ಉದ್ಗಾರವನ್ನಷ್ಟು ಬಿಟ್ಟರೆ ತಮ್ಮ ಆಂಗ್ಲ ಭಾಷಾಜ್ಞಾನದ ಗೌರವಕ್ಕೆ ಕುಂದುಂಟಾಗದು!" ಎಂದು ಸೂಚಿಸಿದೆ

"ಯಸ್! ಎಗ್ಝೆಟ್ಲಿ! ಎಗ್ಝೆಟ್ಲಿ! ಥೇಂಕ್ಸ್!" ಎಂದು ಸಂತೋಷದಿಂದ ತನ್ನ ಸಮ್ಮತಿ ಸೂಚಿಸಿದನು.

ಇದೇ,—ಇಷ್ಟೇ ಸ್ವದೇಶಿ ಕತೆ

---

# ೧೨. ಸ್ವದೇಶೀ ಹೆಸರು.

"ಸುಬ್ಬು! ದೇವರಿದ್ದಾನೆ. ಬರೆದೇ ಬಿಡುವೆನು. ಆದರೆ, ಹೆಸರೇನು ಕೊಡಲಿ?" ಎಂದೆ.

"ಅಬ್ಬ! ಯಾವ ಸುಟ್ಟವನು ಬಂದಿದ್ದಾನೋ ಎಂದೆಣಿಸಿದೆ. ಸುಬ್ಬು! ನಿಮ್ಮ ಕೊಬ್ಬು!—'ಟೋಮ್' ಇದ್ದುದು ಸುಬ್ಬು ಆದುದು ಯಾವಾಗ?

ಹೊಸ ವರ್ಷದ ಬಿರುದೇ?'' ಎಂದು ಒಂದು ಕೊಳಲಧ್ವನಿಯು ಬಾಗಿಲ ಸಂದಿನಿಂದ ಕೇಳಿಸಿತು.

ಹಲ್ಲುನೋವು ನಿಂತ ದಿನದಿಂದ ಆಕೆಯು ಕಂಠವೇ ಬದಲಾಗಿ ಹೋಗಿತ್ತು. ಇಂಗಿನ ಖರ್ಚು ಕಡಿಮೆ, ಮೆಣಸಿನ ಖರೀದಿಯೂ ಕಡಿಮೆ; ನಶ್ಯದ ಮಾತೇ ಇರಲಿಲ್ಲ. ಆದರೆ, ಎರಡು ದಿನಕ್ಕೊಮ್ಮೆ ಬೇವಿನ ಮರ ಗಳನ್ನು ನಾನೇ ಹುಡುಕುತ್ತ ಹೋಗಿ, ವಿಚಿತ್ರವಾಗಿ ಅವುಗಳ ಕೊಂಬುಗಳಿಗೆ ನೇತಾಡಿ ಸ್ವರ್ಗವನ್ನೆದುರು ನೋಡುತ್ತ ಮರವೇರಿ, ಕಡ್ಡಿಗಳನ್ನು ಕಿತ್ತು ಕಿಸೆಗೆ ತುರುಕಿ, ಮೊರೆಗೆ ತಂದೊಪ್ಪಿಸುವ ಪುಣ್ಯಕಾರ್ಯವನ್ನು ಹೊತ್ತು ಕೊಳ್ಳುವಂತಾಗಿತ್ತು 'ಸ್ವದೇಶೀ' ಎಂಬುದರಲ್ಲಿ ಒಂದಡಿ ಮುಂದೆ ಇಟ್ಟು ಬೇವಿನ ಮರದ ಕಡ್ಡಿಯೇ 'ಬ್ರಶ್' ಎಂದು ನಾನು ಕೊಟ್ಟ ಬೋಧನೆಯು ಚೆನ್ನಾಗಿ ಮನಸ್ಸಿಗೆ ನಾಟಿಯೇ ಮೊರೆಯು ತಾನು ಮೂರಡಿ ಮುಂದೆ ಇಟ್ಟು, ಗಂಡನು ಸ್ವತಹ ಸಾಹಸದಿಂದ ತಂದರೆ ಮಾತ್ರ 'ಶುದ್ಧ ಸ್ವದೇಶೀ' ಎನಿಸುವು ದೆಂದು 'ಸುಜ್ಞಾನದಿಂ ನೋಡುತ'—ಒಮ್ಮೆಗೆ ತಂದ ನೂರು ಕಡ್ಡಿಗಳನ್ನು ದಿನಕ್ಕೊಂದರಂತೆ ಎರಡು ದಿನ ಮಾತ್ರ ಉಪಯೋಗಿಸಿ—ಉಳಿದ ೯೮ರ ಮಾತೆತ್ತಿದರೆ ಸಿಡಿದೆದ್ದು ಪುನಃ ೧೦೦ಕ್ಕೆ 'ಆರ್ಡರು' ಕೊಡುತ್ತಿದ್ದಳು. ಹಗಲಲ್ಲಿ ಬೇವಿನ ಮರಗಳನ್ನೇರಿದರೆ ಸ್ನೇಹಿತರು ಕಂಡು ನನ್ನ ಸ್ವಾಸ್ಥ್ಯದ ವಿಷಯ ಸಂಶಯಗೊಂಡಾರೆಂಬ ಸಂಶಯದಿಂದ ಸೂರ್ಯಾಸ್ತಮಾನವಾದ ಮೇಲೆಯೇ ಆ ಕಸರತ್ತಿಗೆ ತೆರಳುತಿದ್ದೆ ಇಷ್ಟಾದರೂ ನನ್ನ ಸ್ವದೇಶೀ ಪ್ರೇಮವು ಎಳ್ಳಷ್ಟು ಕಡಿಮೆಯಾಗಲಿಲ್ಲ

"ಬಾ, ನಮ್ಮಲ್ಲಿನ್ನು 'ಟೋಮ್' ಇಲ್ಲ, ಸುಬ್ಬು ಮಾತ್ರ—ತಿಳಿ ಯಿತೇ?'' ಎಂದೆ

ಮೊರೆಯು ಕೊಠಡಿಗೆ ಬಂದು, ಮೇಜಿನ ಮೇಲಕ್ಕೆ ಬಾಗುತ್ತ, "ಅದೇನು, ಸುಬ್ಬು ಎನ್ನುವುದೇಕೆ?" ಎಂದು ಕೇಳಿದಳು

"ಟೋಮ್ ಎಂಬ ಹೆಸರು ವಿದೇಶಿ!''

"ನಿಮಗೆ ಹುಚ್ಚು! ನಾಯಿಯ ಹೆಸರಲ್ಲಿಯೂ ವಿದೇಶೀ-ಸ್ವದೇಶೀಗಳ ಮಾತೇ?''

"ಕೇವಲ ತತ್ವ, ನೀತಿ ಸ್ವದೇಶಿ ನಾಯಿಗೆ ವಿದೇಶಿ ಹೆಸರೇಕೆ?

ಐರೋಪ್ಯರು ತಮ್ಮ ನಾಯಿಗಳನ್ನು 'ನಾಣಿ' 'ಕಿಟ್ಟು' ಮುಂತಾಗಿ ಕರೆವರೇ? ಅವರಲ್ಲಿ ಸ್ವದೇಶೀ ಎಂಬುದರ ಪ್ರೇಮ ಅಷ್ಟಿದೆ. ಅವರಷ್ಟೆ ಸ್ವದೇಶೀ ನಿಷ್ಠಾವಂತರು ನಾವೂ ಆಗಬಾರದೇ? ನಾಯಿಯ ಹೆಸರಿಗೂ ನಮಗೆ ವಿದೇಶೀಯರೇ ಗತಿಯೇ? ಆಚಾರ್ಯ ಪ್ರಫುಲ್ಲ ಚಂದ್ರರೊಯ್‌ರ. .''

"ಸಾಕು, ಸಾಕು! ಔಷಧವಿಲ್ಲದ ಹುಚ್ಚು ಇದು! ನಾಯಿಗೆ–'ಸುಬ್ಬು!' ಗಂಡಸರಿಗೆ ಅಭಿಮಾನ ಇಲ್ಲ! ಮನುಷ್ಯರ ಹೆಸರು ನಾಯಿಗೇ?''

"ಮತ್ತೇನೆಂದು ಕರೆಯಲಿ? ನಾಯಿ ಜಾತಿಯಲ್ಲಿ ಹೆಸರಿಡುವ,— ನಮಗೆ ತಿಳಿಯುವ—ಅದ್ಭುತ ಇನ್ನೂ ಘಟಿಸಿಲ್ಲ ಮನುಷ್ಯರೇ ಕರುಣೆ ಗೊಂಡು ಒಂದು ಹೆಸರನ್ನು ಕಲ್ಪಿಸಿ ಆ ಬಡ ಪ್ರಾಣಿಗಳಿಗೆ ನಾಮಕರಣದ ಉಪಕಾರ ಮಾಡುತ್ತಿರುವರು!—ಏನು, ಏನೆನ್ನಬೇಕೆನ್ನುವೆ?—'ಶುನಕ ರತ್ನ'ವೆನ್ನಲೇ?''

"ನೆರೆಕೆರೆಯ ರತ್ನನ ಗಂಡನು, ತನ್ನ ಹೆಂಡತಿಗೆ ಪರಿಹಾಸ್ಯಮಾಡು ತ್ತಿರುವರೆಂದೆಣಿಸನೇ?''

"ಶ್ವಾನಮಣಿಯೆಂದರಾಗದೇ?''

"ಅದು ಉಚ್ಚಾರಕ್ಕೆ ಸ್ವಲ್ಪ ಕಷ್ಟ ಮುಂದೆ ನಾವು ಸುಲಭೋ ಚ್ಚಾರಕ್ಕಾಗಿ 'ಶ್ವಾ'ವನ್ನು ಬಿಟ್ಟು 'ನಮಣಿ' ಎಂದು ಕರೆದರೆ, ರತ್ನನ ಅತ್ತಿಗೆಗೆ ದುಃಖವಾಗುವುದೇನೋ!''

ರತ್ನನ ಅತ್ತಿಗೆಯ ಹೆಸರು ರಮಣಿ! ಒಂದು ನಿಟ್ಟುಸಿರುಬಿಟ್ಟೆ. "ಮೀರಾ! ಹೀಗಾದರ ಬಾಳುವುದೇ ಕಷ್ಟ ನಾವು ನಿರಪರಾಧಿಗಳಾಗಿದ್ದರೂ ಇತರರಿಗೆ ದುಃಖವೆಂದರೆ ಅದೊಂದು ನಮಗೂ ದುಃಖ! ಆದುದರಿಂದ 'ಶ್ವಾನರಾಜ'ನೆನ್ನುವ ''

ಮೀರೆಗೆ ಕೋಪಬಂತು "ಸುಬ್ಬು ಆಯಿತು—ರತ್ನವಾಯಿತು— ಮಣಿಯಾಯಿತು—ಇನ್ನು ರಾಜ!—ಮುಂದೆ ಚಕ್ರವರ್ತಿ—ಆ ಮೇಲೆ .... ನಿಮ್ಮ ನಾಲಿಗೆಯೆ! ನಮ್ಮ ರಮೆಯ ಗಂಡನ ಹೆಸರು ರಾಜು ಎಂಬುದನ್ನು ಲಕ್ಷಿಸುವಂತಿಲ್ಲವೇ?''

ನನ್ನ ಬಡನಾಯಿಗೊಂದು ಹೆಸರನ್ನು ದಯಪಾಲಿಸದಷ್ಟಕ್ಕೂ ಮೀರೆಯ ಬಳಗವು ಬೆಳೆದಿರಬೇಕೇ?

"'ಒಹೋಯ್' ಎನ್ನುವ, ಹಾಗೆ ಸಂಬೋಧಿಸುವುದೇ ಒಂದು ಹೆಸರಾಗಿರಲಿ!" ಎಂದೆ ಮೀರೆಯು ನಕ್ಕಳು ಆಕೆಯನ್ನು ನಗಿಸುವ ಗುಟ್ಟು ನನಗೆ ಗೊತ್ತು ಎಂದು ಹೆಮ್ಮೆಪಟ್ಟೆ.

"ನಿಮ್ಮ ಮನಸ್ಸಿನಲ್ಲಿದ್ದಂತಾಗಲಿ! ಜನರು ನಿಮ್ಮನ್ನೆ ನೋಡಿ ನಕ್ಕಾರು! ಮಾತ್ರ, ಸಲೀಮನ ಮೀರೆಯ ನೆನಪಾಗಿ ನನ್ನ ಹೆಸರನ್ನು 'ನೇತ್ರಾವತಿ' ಅಥವಾ 'ಮೀನಾಕ್ಷಿ' ಎಂದು ಬದಲಾಯಿಸಬೇಡಿರಿ! ನಾನು ಕೇಳುವವಳಲ್ಲ!'' ಎಂದು, ನಾನು ಮರೆಯದಂತೆ ತನ್ನ ರೂಪದ ಶ್ರೇಷ್ಟತೆಯನ್ನು ನೆನಪು ಮಾಡಿಕೊಟ್ಟು, ನಾನೇ ಸಾಹಸಗೊಂಡು ಕಲ್ಪಿಸಿದ ಹೆಸರುಗಳನ್ನೊಲ್ಲದೆ— ತಾನಾಗಿ ಸೂಚಿಸದೆ, ಮೇಜಿನ ಮೇಲಿದ್ದ ಲೇಖನಿಯನ್ನು ತೆಗೆದು, ಕಾಗದದ ಮೇಲೆ 'ನಾಯಿ—ನಾಯಿ—ನಾಯಿ—ನಾಯಿ' ಎಂದು ಏಳೆಂಟು ಬಾರಿ ಬರೆದುಬಿಟ್ಟಳು. ನಾನು ಆ ಲೇಖನಿಯನ್ನು ಮೆಲ್ಲನೆ ನನ್ನ ಕೈಗೆ ಸೆಳೆದು ಕೊಂಡು ಆಕೆಯ ಅರಿವಿಲ್ಲದೆ—'ನಾಯಿ' ಎಂಬುದರ ಮೇಲೆ 'ನಿೀರೆ' ಎಂದು ಬರೆದು ಕೆಳಗೆ ನನ್ನ ಸಹಿಹಾಕಿ ಇಟ್ಟು,—

"ಇರಲಿ, ನಾನೊಂದು ಕತೆ ಬರೆಯಬೇಕೆಂದಿದ್ದೆ ಏನು ಹೆಸರಿಡಲಿ? ಅದನ್ನೇ ಸುಬ್ಬುವಿನೊಡನೆ ಕೇಳುತ್ತಿದ್ದೆ ಆದರೆ, ಅದಕ್ಕೆ ನಿನ್ನಷ್ಟು ಮಿದುಳಿಲ್ಲ.—ನಿನ್ನಷ್ಟು ಅಂದವಾಗಿ ಮಾತಾಡಲೂ ಬಾರದು ಆದಕಾರಣ ನೀನೇ ಸೂಚಿಸು'' ಎಂದೆ

"ನಾಯಿಗೆ ನಿಮಿಷಕ್ಕೆ ನಾಲ್ಕು ಹೆಸರಿಡುವ ಚಾತುರ್ಯವುಳ್ಳವರು ನೀವು, ಸಣ್ಣ ಕತೆಗೊಂದು ಪುಟ್ಟ ಹೆಸರಿಡಲು ಹೆಂಡತಿ ಬೇಕೇ? ನಾಚಿಕೆಯಿಲ್ಲವೇ?'' ಎಂದಳು ಮೀರೆ

"ನಾಚಿಕೆ? ಮಾವಯ್ಯನವರಿಂದ ನಿನ್ನನ್ನು ಕೊಂಡುಕೊಂಡಾಗ ಬೇರೆ ಬೆಲೆಕೊಡಲಾರದೆ ನಾಚಿಕೆಯನ್ನು ಕೊಟ್ಟುಬಿಟ್ಟೆ. ಆಗಲಿ, ಏನನ್ನು ಸೂಚಿಸುವೆ?''

"ಕತೆಯೇನು?''

"ಕೃಷ್ಣಸ್ವಾಮಿ ಎಂಬವನೊಬ್ಬ ದಿಂಡ; ಅವನಿಗೆ ದೊಡ್ಡ ಮುಖ; ದೊಡ್ಡ ಕಣ್ಣು; ಸಣ್ಣ ಮೈ ಯಾರೂ ಹೆಣ್ಣು ಕೊಡುವವರು ಮುಂದೆ ಬರಲಿಲ್ಲ . ....."

"ನಾನು ಹೇಳಲಿಲ್ಲವೇ, ಗಂಡಸರಿಗೆ ನಾಚಿಕೆಯಿಲ್ಲವೆಂದು? ಹೆಣ್ಣು-ಮದುವೆ—ಚುಂಬನ, ಇಷ್ಟಿಲ್ಲದೆ ನಿಮ್ಮ ಕತೆಯಿಲ್ಲ!" ಎಂದು ಬಿರುನುಡಿಯನ್ನಾಡಿದಳು

"ಸ್ವಾಮಿಯು ತಾನೇ ಹುಡುಕಿ ತರುವೆನೆಂದು ಹೊರಟನು. ದಾರಿಯಲ್ಲೊಂದು ಹೊಟೇಲು ಸ್ವಾಮಿಯು ಊಟಕ್ಕೆ ತಂಗಿದನು ಅಲ್ಲಿಯ ಯಜಮಾನಿಗೆ "

"ನೋಡಿ, ಪುನಃ ಹೆಂಗಸಿನ ಮಾತು!"

" ಇಬ್ಬರು ಹೆಣ್ಣು ಮಕ್ಕಳು "

"ಒಂದಲ್ಲ—ಎರಡು!"

"ಒಬ್ಬಳ ವಯಸ್ಸು ಹದಿನಾರು "

"ಅಯ್ಯೋ, ನಿಮ್ಮ ಕತೆಗಳಲ್ಲಿ ಸ್ತ್ರೀಯರೆಲ್ಲ ಹದಿನಾರರಿಂದ ಹದಿನೆಂಟು ವಯಸ್ಸಿನೊಳಗಿನವರೇ!–ಮಾರ್ಕಂಡೇಯನಂತೆ! ಪ್ರಾಯಸಂದವರ ಮೇಲೆ ಅಷ್ಟು ಅನಾದರ!"

"ಮತ್ತೊಬ್ಬಳಿಗೆ ಇನ್ನೂ ಹದಿನೆಂಟಾಗಿರಲಿಲ್ಲ!"

"ನೋಡಿ! ನಾನು ಹೇಳಿದಲ್ಲಿಗೇ ಬಂತು! ಯಜಮಾನಿಯ ಪ್ರಾಯವನ್ನೇಕೆ ಹೇಳಲಿಲ್ಲ?"

"ಸ್ವಾಮಿಗೆ ಕಿರಿಯರ ಮೇಲೆ ಮನಸ್ಸು ನೆಟ್ಟುಕೊಂಡಿತು "

"ಕಿರಿಯರ ಮೇಲೆ ದೃಷ್ಟಿ! ಕತೆ ಬರೆಯುವ ಬದಲಾಗಿ ನೀವು ಮದುವೆ ಮನೆಯ ಲೆಕ್ಕ ಬರೆವ ಕರಣೀಕರಾಗಬಾರದೇ?"

"ಆ ಕಿರಿಯವಳ ಮೈವರ್ಣ ಕೇತಕಿಯಂತೆ "

"ರಾಮರಾಮ! ಕೇತಕಿಯಂತೆ ಮೈಗೆ ಮುಳ್ಳುಗಳೂ ಇರಲಿಲ್ಲವಷ್ಟೆ! .... ಒಂದು ಮದುವೆಯ ಕಂಪೆನಿ ತೆರೆಯಿರಿ, ಅಲ್ಲಿ ಕುಳಿತು, ಹಾದಿ ಹೋಕರೆಲ್ಲರ ರೂಪದ ಮನೋಹರತೆ, ವಯಸ್ಸಿನ ಅಂದಾಜು ಸಂಖ್ಯೆ. ನಡಿಗೆಯ ಲಾಲಿತ್ಯ, ಸೀರೆಯ ಸೊಬಗು, ಕೈಬಳೆಗಳ ಝಣತ್ಕಾರದ ರಮ್ಯತೆ, ಕಣ್ಣುಗಳ ಚಲನೆಯ ಬೆಡಗು ಮುಂತಾದುವನ್ನು ಬರೆದಿಡುವ ಕೆಲಸ ಕೈಗೊಳ್ಳಿರಿ!"

ಎಂತಹ ಮಾತುಗಳು! ಗಂಡಸರಿಗೆ ಅಭಿಮಾನವಿಲ್ಲ–ನಾಚಿಕೆಯಿಲ್ಲ–

ಮಿದುಳಿಲ್ಲ,–ಮದುವೆ, ಚುಂಬನಗಳಿಲ್ಲದೆ ಕತೆ ಬರೆಯಲು ತಿಳಿಯುವುದಿಲ್ಲ–ಕಿರಿಯ ಹೆಣ್ಣನ್ನು ಬಿಟ್ಟು ಮಾತಿಲ್ಲ.... ...... .!

ಕೋಪ ಬಂದುದು ನನಗೆ ಈಗಲೀಗ "ಮೀರಾ!" ಎಂದೆ.

"ಏನು?"

"ಗಂಡಸರಿಗೆ ಅಭಿಮಾನವಿದೆ!"

"ಇಲ್ಲ"

"ನಾಚಿಕೆ ಇದೆ!"

"ಎಳ್ಳಷ್ಟೂ ಇಲ್ಲ."

"ಮಿದುಳಿದೆ!"

"ಕಾಲಾಣೆ ತೂಕವೂ ಇಲ್ಲ"

"ಚುಂಬನದ ಮಾತಿಲ್ಲದೆ ಕತೆ ಬರೆಯಬಲ್ಲರು!"

"ಒಂದು ಪಂಕ್ತಿಯನ್ನೂ ಬರೆಯಲಾಗುವುದಿಲ್ಲ."

"ಕಿರಿಯ ಹೆಣ್ಣನ್ನು ಬಿಟ್ಟುಬಿಡಬಲ್ಲರು!"

"ಅಸಾಧ್ಯ"

ಹೆಜ್ಜೆ ಹೆಜ್ಜೆಗೂ ಕಡಿದಂತಾಯಿತು. ಹೆಂಗುಸರಿಗೆ ಗಂಡುಸರ ಜಾತಿಯ ವಿಷಯ ಇಷ್ಟು ಕನಿಷ್ಟತರ ಅಭಿಪ್ರಾಯವೇ?— ಎಂತಹ ನಾಲಿಗೆ!

ಹೇಳಿದೆ "ಮೀರಾ, ಬರೆಯಬಲ್ಲೆ! ಹೆಂಗುಸರಿಲ್ಲದೆ, ಸ್ತ್ರೀಪಾತ್ರದ ಸನ್ನಿವೇಶವೇ ಇಲ್ಲದೆ, ಒಂದು ಕತೆ ಬರೆದುಬಿಡುವೆನು ನೀನು ನೋಡುವಿಯಂತೆ! ಹೆಸರನ್ನೂ ಬಲ್ಲೆ,—'ಆ ನಾಯಿ!'"

"ಈ ಕೋತಿ ಎಂದರಾಗದೇ?"

"ಅಥವಾ,—ಹೆಂಗುಸರಿಲ್ಲದಿದ್ದರೆ!"

"ನೀವು ಜನನಕ್ಕೆ ಬರುತ್ತಲೇ ಇದ್ದಿಲ್ಲ" ಎನ್ನುತ್ತ ಮೀರೆಯು ತಿರುಗಲು, ವೇಣಿಯನ್ನು ಹಿಡಿದೆಳೆದಾಗ "ಒರಟು ಬುದ್ಧಿ!" ಎನ್ನುತ್ತ ತಪ್ಪಿಸಿಕೊಂಡು ಅದೃಶ್ಯಳಾದಳು

ಅಷ್ಟಕ್ಕೂ ಪರಾಭೂತನಾಗಿ ಹೋದೆ! ನಿಮಿಷ ನಿಮಿಷಕ್ಕೂ ಅಪಜಯ!!

ಮೊರೆಯ ಮೇಲೆ ಸೇಡುತೀರಿಸಿಕೊಳ್ಳುವೆನೆಂದು ಆಗಲೇ ಬರೆಯಲು ಆರಂಭಿಸಿದೆ ಸಾರಾಂಶವಿಷ್ಟೆ —

**"ಧ್ವಜರಕ್ಷಕ"**

'ಟೋಮ್' ಎನ್ನುತ್ತಿದ್ದರು,—ಅದನ್ನು ಕುಂಞಾರಾಮ ನಾಯರನಿಗೆ 'ಸ್ವದೇಶೀ' ಪ್ರೇಮವು ಮೇರೆ ಮೀರಿದುದರಿಂದ ಹೆಸರು ದೇಶೀಯಾಗಬಾರದೇಕೆಂದು ಹೊಳೆಯಿತು ನಾಮವು ಅನ್ವರ್ಥವಾದುದಾಗಿರಬೇಕೆಂದೇ ಆಲೋಚನೆಯಲ್ಲಿದ್ದನು ತಿಂಗಳೆರಡು ಕಳೆದರೂ ಹೆಸರು ಹೊಳೆಯಲಿಲ್ಲ ಒಂದು ರಾತ್ರಿ ಅವನು ಹೀಗೆಯೇ ಆಲೋಚಿಸುತ್ತ ತನ್ನ ಮಹಡಿಯ ಮೇಲೆ ಮಲ್ಲಗಿ, ಕಿಟಕಿಯಿಂದ ಹೊರಗೆ ನೋಡುತ್ತಿದ್ದನು. ಬೆಳ್ಳನೆ ಬೆಳದಿಂಗಳಿತ್ತು ನಾಯಿಯು ಕೆಳಗೆ ಬೊಗಳಿತು ನೋಡಿದರೆ,—ಮನೆಯ ಪ್ರವೇಶದ್ವಾರದಲ್ಲಿ ಕಟ್ಟಿದ್ದ ರಾಷ್ಟ್ರೀಯ ಧ್ವಜವನ್ನು ಹಾದಿಹೋಕನೊಬ್ಬನು ಕಿತ್ತು ತೆಗೆವ ಪ್ರಯತ್ನದಲ್ಲಿದ್ದನು ಒಂದೇ ನಿಮಿಷ,—ನಾಯಿಯು ಅಪರಿಚಿತನ ಮೇಲಕ್ಕೆ ನೆಗೆಯಿತು ಮರುನಿಮಿಷದಲ್ಲಿ ಇಬ್ಬರೂ ರಸ್ತೆಯಲ್ಲಿ ಹೊರಳಾಡಿದರು. ಮೂರನೆ ನಿಮಿಷದಲ್ಲಿ ಅಪರಿಚಿತನು ಮಾಯ! ನಾಯಿಯು ಧ್ವಜದಡಿಗೆ ಬಂದು ಕುಳಿತಿತು ಕುಂಞಾಕಣ್ಣನಿಗೆ 'ಟೋಮು'ನ ಸ್ವದೇಶೀ ಪ್ರೇಮವನ್ನೂ ರಜಪೂತರಂತಹ ಶೌರ್ಯವನ್ನೂ ಕಂಡು ಆಶ್ಚರ್ಯ— ಸಂತೋಷಗಳುಂಟಾದುವು. ಆಗಲೇ ತಟ್ಟನೆ ಒಂದು ಹೆಸರೂ ಮನಸ್ಸಿನಲ್ಲಿ ಉದಯಿಸಿತು —'ಧ್ವಜರಕ್ಷಕ!' ಮರುದಿನ ಟೋಮನ ಹೆಸರು 'ಧ್ವಜರಕ್ಷಕ'ನೆಂದು ಕಳೆದ ರಾತ್ರಿಯ ವಿಸ್ಮಯಕರ ಘಟನೆಗಳೊಂದಿಗೆ ಊರಿನಲ್ಲೆಲ್ಲ ಪ್ರಸಿದ್ಧವಾಯಿತು. ಮುದುಕ ಫೊಟೋಗ್ರಾಫರರೊಬ್ಬರು ಸ್ನಾಕಲಿನಲ್ಲೋಡಿ 'ಧ್ವಜರಕ್ಷಕ'ನ ಒಂಭತ್ತು ಬಗೆಯ ಭಾವಚಿತ್ರಗಳನ್ನೆತ್ತಿ, ಬಾಲವನ್ನೊಬ್ಬರಿಗೂ, ಮೂತಿಯನ್ನೊಬ್ಬರಿಗೂ, ಕಾಲುಗಳನ್ನೊಬ್ಬರಿಗೂ, ಇವೆಲ್ಲವುಗಳನ್ನು ಕೆಲವರಿಗೂ ವಿಕ್ರಯಿಸಲು,—ಹಾಗೂ ಪ್ರಚಾರವಾಯಿತು. ಆದರೆ, ದುರ್ದೈವವಶಾತ್ 'ಧ್ವಜರಕ್ಷಕ'ನು ಕೆಲವು ದಿನಗಳಲ್ಲೇ ಒಂದು ವಿಷಪೂರಿತ ಅಂಬೋಡೆಯನ್ನು ತಿಂದು ಅದೇ ಧ್ವಜದ ಕೆಳಗೆ ಮಲಗಿ ಪ್ರಾಣತ್ಯಾಗ ಮಾಡಿತು! ನಗರವೆಲ್ಲ ಶೋಕದಿಂದ ಕರಗಿತು! ಊರಲ್ಲಿ ಹರತಾಳ. ಎಲ್ಲರೂ ಅಂಗಡಿಗಳನ್ನು ಮುಚ್ಚಿ ರಾಷ್ಟ್ರೀಯ ಧ್ವಜಗಳೊಂದಿಗೆ

'ಧ್ವಜರಕ್ಷಕ'ನ ಶವವನ್ನು ನಗರದ ಹೊರಗೆ ಹಿಂಬಾಲಿಸಿ, ಅಲ್ಲಿ ಎಂಟಡಿ ಆಳಕ್ಕೆ ಹೂಳಿಟ್ಟು ೫ ರೂಪಾಯಿಯ ಹೂಗಳನ್ನು ಸುರಿದು, ೨ ಸೇರು ಊದುಬತ್ತಿಯನ್ನು ಹೊತ್ತಿಸಿಟ್ಟು, 'ದೇಶಭಕ್ತ ಧ್ವಜರಕ್ಷಕಕೀ ಜೈ' ಎಂದು ಆಕಾಶವನ್ನು ಭೇದಿಸಿ ದೇವರ ಕಿವಿಗೆ ಖಂಡಿತವಾಗಿ ಮುಟ್ಟುವಂತೆ ಘೋಷಗಳಿಂದ ಮೆರೆದರು. ದೇಶಭಕ್ತರೊಬ್ಬರು "ಹಾ ಪೋದನೇ ಧ್ವಜರಕ್ಷಕನು ವರ । ವೀರ ಸ್ವರ್ಗವ ಪಡೆದನೇ ॥ ಮಾದಿಗರ ಅಂಬೋಡೆ ತಿನ್ನುತ । ಬೂದಿಯಾದನೆ ಸತ್ತನೇ ॥" ಎಂದು ಹೃದಯಂಗಮವಾದ ಕವಿತೆಯನ್ನೂ ಅರ್ಥತಾವಿನಲ್ಲಿ ಅಚ್ಚುಹಾಕಿಸಿ, ಅಂದೇ ಸಾಯಂಕಾಲ ಮೈದಾನಿನಲ್ಲಿ ದುಃಖಸೂಚಕ ಠರಾವು ಮಾಡಲು ಕೂಡಿದ ಜನರಿಗೆ,—'ಇದರಿಂದ ಹುಟ್ಟಿ ಬರುವ ಹಣವು ಧ್ವಜರಕ್ಷಕನ ಸ್ಮಾರಕಕ್ಕಾಗಿ ಸಹಾಯಧನ'ವೆಂದು ಪ್ರತಿಗೆ ೩ ಪೈಯಂತೆ ವಿಕ್ರಯಿಸಿದರು ಊರ ಸದ್ಗೃಹಸ್ಥರು ವಂತಿಗೆಮಾಡಿ, ಶೋಕಾಕುಲರಾಗಿ ಹುಚ್ಚುತನದ ಚಿಹ್ನೆಗಳನ್ನು ತೋರಿದ ಕುಂಞಾನಾಯರರಿಗೆ ಒಂದು ನಾಯಿಮರಿಯನ್ನು ಬಹುಮಾನಕೊಟ್ಟರು. ಈ ಬಹುಮಾನದ ನಾಯಿಯು ಕಳ್ಳರು ಬಂದರೆ ಎಂದೂ ಬೊಗಳದೆ ಅಪಾಯಕಾರಿ ಎಂದು ಕಂಡರೆ ತಪ್ಪದೆ ಕಚ್ಚುತ್ತಿದ್ದ ಕಾರಣ ಇದಕ್ಕೆ 'ಸತ್ಯನಾರಾಯಣ' ಎಂದುನಾಮಕರಣವಾಯಿತು ನಾಯರರು ಇಂದಿಗೂ ಆ ಮೃತಶ್ವಾನದ ಹೆಸರಲ್ಲಿ ಈ ಹೊಸ ಮರಿಗೆ ವಂತಿಗೆಯ ಹಾಲು ಕುಡಿಸಿ, ಧ್ವಜರಕ್ಷಕನ ಹೆಸರು ಚಿರಸ್ಥಾಯಿಯೆನಿಸುವಂತೆ ಸಾಧಿಸುತ್ತಿರುವರು ಇಂತಿದು **'ಆ ನಾಯಿ'**.

ಕತೆ ಮುಗಿಯಿತು ಸ್ತ್ರೀ ಪಾತ್ರವಿರಲಿಲ್ಲ ಮರುದಿನ ಮೀರೆಗೆ ನನ್ನ ಯಶಸ್ಸನ್ನು ತಿಳಿಸಿ, ಗೌರವದಿಂದ ಹೊರಗೆ ಹೋದೆ

"ಟೋಮ್ ಇಲ್ಲ!" ಎಂದು ಗಾಬರಿಯಿಂದ ನುಡಿದಳು ಮೀರೆ,— ನಾನು ಮನೆಯೊಳಗೆ ಕಾಲಿಡುವಾಗ ಈ ಉತ್ಸಾಹ!

"ಸುಬ್ಬು? ಎಲ್ಲಿ ಹೋದನು?"

"ಅಲ್ಲ,—ಟೋಮ್! ಎಲ್ಲಿ ಹೋದನೋ! ಅಯ್ಯೋ, ಎಷ್ಟು ಸುಂದರ ನಾಯಿ!"

'ಕೊರಂಟ್ಯಾನ್' ಬಳಿಯಲ್ಲಿ ವಿದ್ಯುಚ್ಛಕ್ತಿಯ ಪ್ರವಾಹದಲ್ಲಿ— ಆಂಗ್ಲೇಯರಂತೆ—ಗೌರವಾರ್ಹವೆನಿಸುವಂತೆ ನಗುತ್ತ ತನ್ನ ಜಾತಿಗೃಹಸ್ಥ

ರೊಡನೆ ಪ್ರಾಣಬಿಡುವ 'ಸುಬ್ಬು' (ಅಥವಾ ಟೋಮ್?)ನ ಚಿತ್ರವು ಕಣ್ಣ ಮುಂದೆ ಬಂದಂತಾಗಿ ತಲೆತಿರುಗಿತು ಅಲ್ಲಿಂದಲೇ ಹೊರಗೆ ಕಾಲಿಟ್ಟೆ,— ಸುಬ್ಬುವನ್ನು ಹುಡುಕಹೋಗುವೆನೆಂದು.

"ನಿಲ್ಲಿರಿ!" ಎಂದಳು ಮೀರೆ

"ಏಕೆ" ಎಂದು ಕೇಳಿದೆ

"ಇತ್ತ ಬನ್ನಿರಿ!—ಅಷ್ಟು ಗಾಬರಿ ಬೇಡ"

ಬಂದು, "ಸುಬ್ಬು ಇಲ್ಲ—ಹುಡುಕಲೇ ಬೇಕು" ಎಂದೆ

"ಹುಡುಕಬಹುದು ಆದರೆ, ಒಂದು ಪ್ರಶ್ನೆಗೆ ಉತ್ತರ ಕೊಡಬೇಕು ನಿಮ್ಮ ಆ ಕತೆಯಲ್ಲಿ ಆ ಸುಟ್ಟನಾಯರನ ವಂತಿಗೆಯ ನಾಯಿಯ ಹೆಸರೇನು?"

"ಫೂ, ಅಷ್ಟೇ? ಸತ್ಯನಾರಾಯಣ!"

"ಈಗಲೇ ಆ ಕಾಗದವನ್ನು ಸುಟ್ಟುಹಾಕಬೇಕು!"

"ನಾಯರನ ನಾಯಿ.. "

"ಇಬ್ಬರೂ ಈ ನಿಮಿಷದಲ್ಲೆ ಬೂದಿಯಾಗಬೇಕು! ಇಲ್ಲದಿದ್ದರೆ ..!"

ತಿಳಿಯಿತು,—ಮೀರೆಗೆ ಕೋಪ ಬಂದಿದೆ! 'ಸ್ಟಾಂಡಿ'ನಲ್ಲಿದ್ದ ಸೀರೆಯ ಕಡೆಗೆ ದೃಷ್ಟಿ ಎತ್ತಿದ್ದಾಳೆ!—ತವರುಮನೆಯ ನೆನಪು! (ಕಳೆದ ವರ್ಷ ನೆರ ಬಂದಾಗ ಆಕೆಯ ತವರುಮನೆಯ ಜಗಲಿ ತನಕವೂ ನೀರು ಬಂದಿತ್ತಂತೆ ಮನೆ ಸುರಕ್ಷಿತ! ಅದೇ ಆಕೆಯ ಹೆಮ್ಮೆ!)

"ಮೀರಾ! ಸತ್ಯನಾರಾಯಣ ಎಂದರೆ. .."

"ಇಲ್ಲ, ನಾನು ಕೇಳುವುದಿಲ್ಲ ಅಣ್ಣನು ಇನ್ನೆರಡು ದಿನಗಳಲ್ಲೆ. "

ಹಾ! ಸರಿ! ಆಕೆಯ ಅಣ್ಣನ ಹೆಸರು ಸತ್ಯನಾರಾಯಣ!—ಎಂತಹ ಮಹತ್ಪಾಪ ಮಾಡಿರುವೆನು!!

"ಆ ಹೆಸರು ಹೋಗಲಿ 'ಹನುಮಂತ' ಎಂದು ಬರೆವೆನು

"ಹೊರಟೆ—ಹೊರಟೇ ಬಿಟ್ಟೆ ಲಲಿತೆಯ ಮಾವನ. .."

ನಿಜ ನಿಜ! ಲಲಿತೆಯೆಂದರೆ ಸಿಡುಕಿನ ಮೀರೆಯ ಮಿಡುಕಿನ ತಂಗಿ, ಅಂತಹ ಲಲಿತೆಯ ಮಾವನ ಹೆಸರು ಹನುಮಂತರಾಯ. (ನಮ್ಮ ಸುಬ್ಬುವಿಗೇ ಅವಮಾನವಾಗುವಂತೆ ರಾಯರ ರೂಪ)

"ಹಾಗಾದರೆ ಆ ಕತೆ ಹೋಗಲಿ. ಅಥವಾ, ಕುಂಞಿರಾಮ ನಾಯ

ರನೂ, ತನ್ನ ನಾಯಿಯು ಶೋಕ ತಾಳಲಾರದೆ ಪ್ರಾಣತ್ಯಾಗಮಾಡಿದನು ಎಂದು ತಿದ್ದುವೆನು "

"ಭಾರೀ ಲೇಖಕರು ಇಂತಹ ಕತೆ ಬರೆದರೆ ಹೇಗೂ ಆಗಬಹುದು. ಕನ್ನಡ ನಾಡಿನ ಭಾಗ್ಯವೆನಿಸೀತು! ಆದರೆ, ನೀವು ಬರೆದರೆ ಆ ಕತೆಯನ್ನೋದುವ ಕೆಲಮಂದಿಗಳನ್ನು ಸಂಬಳ ಕೊಟ್ಟಾದರೂ ಸಂಪಾದಿಸಿರಿ. ಅಷ್ಟು ಸುಲಭವಾಗಿ ಸಾಯುವ ಆ ಕೋಮಲ ಹೃದಯಿ ನಾಯರನನ್ನು ಆಯುರ್ವೇದದಲ್ಲಿ ಪ್ರಸಿದ್ಧಿಹೊಂದಿದ ಮಲೆಯಾಳಿಗಳು ಮೊದಲೇ ತಿಳಿದಿದ್ದರೆ 'ಸಿಕ್ಲಿಸ್' ಮಾಡಬಹುದಿತ್ತು ಪಾಪ! . ಹೇಗೂ ಇರಲಿ ಇತ್ತ ಬನ್ನಿ. ನಿಮ್ಮ ಸುಬ್ಬುವನ್ನು ನಾನೇ ಹುಡುಕಿಕೊಟ್ಟರೆ ನನಗೇನು ಬಹುಮಾನ ಕೊಡುವಿರಿ?" ಎಂದಳು

ವಿಚಿತ್ರ!

"ನೀನು ಬೆಲೆಕಟ್ಟಲಾರದ ೨೫ ಮುತ್ತುಗಳನ್ನು ಕೊಡುವೆನು!"

"ಖಂಡಿತವೇ? ಇಪ್ಪತ್ತೈದು? ಸಾಲವೇ?"

"ಸಾಲವಲ್ಲ ನಿನಗೆ ಸಂತೋಷವಾಗುವುದಾದರೆ ಸ್ವೀಕರಿಸಬಹುದು. ಇಲ್ಲದಿದ್ದರೆ ಹಿಂತಿರುಗಿ ಕೊಡು ಹಾಗೆಯೇ ಭದ್ರವಾಗಿಟ್ಟುಕೊಳ್ಳುತ್ತೇನೆ "

"ಬನ್ನಿರಿ" ಎನ್ನುತ್ತ ಒಳಗೆ ಕರೆದುಕೊಂಡು ನಡೆದಳು ಒಳಗಿನ ಕೊಠಡಿಯಲ್ಲಿ ನಾಯಿಯು ಬಗುಳಾಟ ಕೇಳುತ್ತಿದೆ ಆದರೆ, ಎಲ್ಲಿಯೂ ಸುಬ್ಬು ಇಲ್ಲ! ಎಂತಹ ಐಂದ್ರಜಾಲ!

"ಸುಬ್ಬು ಎಲ್ಲಿ?" ಎಂದು ಕೇಳಿದೆ

"ಕಣ್ಣು ಮುಚ್ಚಿರಿ!" ಎಂದಳು ಮುಚ್ಚಿಕೊಂಡೆ.

ಎರಡೇ ಕ್ಷಣ,—ಸುಬ್ಬುವು ಬಂದು ನನ್ನ ಕಾಲನ್ನು ನೆಕ್ಕುತ್ತಿರುವುದು ಭಾಸವಾಯಿತು ಕಣ್ಣು ತೆರೆದೆ. ನಿಜವಾಗಿ ಸುಬ್ಬು! ಸಂತೋಷದಿಂದ ಬಾಲವನ್ನಾಡಿಸುತ್ತಿದೆ

"ಮೀರಾ! ಇದೇನು? ಎಲ್ಲಿಂದ?—ಎಲ್ಲ ನಾಟಕ!" ಎಂದೆ

"ಅಹುದು; ಇನ್ನು ನಾಯಿಗೆ 'ಸ್ವದೇಶಿ'ಯ ಹೆಸರಲ್ಲಿ, ಇತರರ ಮನನೋಯಿಸುವ ಹೆಸರಿಡಬೇಡಿರಿ ನಮ್ಮ ಹಿಂದೂ ಸಮಾಜದಲ್ಲಿ ಅದು ಸಲ್ಲದು. ಯಾವ ಹೆಸರೂ ಒಪ್ಪುವಂತಿಲ್ಲ. 'ಟೋಮ್'—'ಟ್ಯಾಗರ್'

ಎನ್ನಲಾರಿರಾದರೆ ಮನುಷ್ಯರಿಗಿಲ್ಲದಂತವುಗಳನ್ನು ಚೆನ್ನಾಗಿ ಆಲೋಚಿಸಿ ಕಲ್ಪಿಸಿ ಇಡಬಾರದೇಕೆ?'' ಎಂದಳು

ಈ ಪ್ರಮಾದ! ಇನ್ನೊಂದು ಗಳಿಗೆ ಆ ಕಪಾಟಿನಲ್ಲಿದ್ದರೆ!

''ಸುಬ್ಬು ಎಂದು ಕರೆದರೇನಾಗುವುದು?''

''ನೀವು ನಿಮ್ಮ ಸುಬ್ಬನೊಂದಿಗೆ ವಿಹಾರಕ್ಕೆ ಹೋದಾಗ 'ಸುಬ್ಬು ಸುಬ್ಬು' ಎಂದು ಕರೆದರೆ ಎರಡು ಕಾಲಿನ ಸುಬ್ಬನೊಬ್ಬನು ತನಗೆ ಎರಡು ಕೈಗಳೂ ಇವೆಯೆಂದು ಪರಿಚಯ ಮಾಡಿಕೊಟ್ಟರೆ?''

"ಟೋಮ್ ಟೋಮ್—ಎಂದರೆ?''

''ಅವಘಡಗಳಿಲ್ಲ ''

ಒಂದು ನಿಮಿಷ ಆಲೋಚಿಸಿದೆ, ಆ ಮೇಲೆ ಹೇಳಿದೆ ''ಬೇಡ, ವಿದೇಶೀ ಹೆಸರಿಗೂ ನಾವು ಶರಣುಹೋಗುವುದು ಬೇಡ. 'ಬೊಮ್' ಎನ್ನುವ ಯಾರಿಗೂ ಕೋಪವಿಲ್ಲ—ದುಃಖವಿಲ್ಲ!''

''ಇರಲಿ! ನೋಡಿ! ಹೆಂಗುಸರಿಲ್ಲದಿದ್ದರೆ! ಎನ್ನುತಿದ್ದಿರಲ್ಲ, ಏನಾಗುವುದೋ ನೋಡಿರಿ .ಹ್ಞಾ, ಮುತ್ತುಗಳೆಲ್ಲಿ?''

ಆಗಲೇ, ಅಲ್ಲೇ, ಒಂದೇ ಕ್ಷಣದಲ್ಲಿ ಇಪ್ಪತ್ತೈದು ಮುತ್ತುಗಳನ್ನು ಕೊಡುವುದೊಂದು ದೊಡ್ಡ ಮಾತೇ?

× × × × ×

ಮೀರೆಯು ಈಗ ನಾಯಿಗೆ ಅನ್ನ ಇಡುವಾಗ 'ಬೊಮ್ ಬೊಮ್' ಎಂದು ಕರೆವುದಿದೆ. ಆದರೆ, ಮೋಟಾರು ಕೊಂಬಿನ ನೆನಪಾಗಿ ನಾಚಿಕೊಳ್ಳುವುದೂ ಇದೆ ''ಸ್ವದೇಶಿಗಾಗಿ ನಾಚಿಕೆ ಬೇಡ'' ಎಂದು ಧೈರ್ಯ ಹೇಳುತಿದ್ದೇನೆ

# ೧೩. ಬಾರದ ಜನ್ಮ ದಿನ

ಒಂದಾನೊಂದು ತಿಂಗಳ ತಾರೀಕು ಒಂದು

ನಾಳೆ ತನ್ನ ಜನ್ಮದಿನವೆಂದು ಮೀರೆ ನನಗೆ ಹೇಳಿ, ಅರ್ಥತಾಂವಿನ ಮೇಲೆ, ಪ್ರಪಂಚದಲ್ಲಿ ಸಿಗಬಹುದಾದ ಉತ್ಕೃಷ್ಟ ವಸ್ತುಗಳ ಹೆಸರುಗಳನ್ನು ಬರೆದು ಕೊಟ್ಟಿದ್ದಳು

"ಏನಿದು, ನಿನ್ನ ಜನ್ಮದಿನೋತ್ಸವ ಸಂಭ್ರಮ—ವೈಭವಗಳೇ! ಹುಟ್ಟಿದ ಇಷ್ಟು ವರ್ಷಗಳ ಮೇಲೆ?" ಎಂದು ಪ್ರಶ್ನಿಸಿದೆ

ಮೀರೆಯ ಅಭಿಮಾನವನ್ನು ಕೆಣಕಿದಂತಾಯಿತು "ನನ್ನ ಜನ್ಮ ದಿನೋತ್ಸವವೆಂದು ಹೇಳಿದೆನಷ್ಟೆ ಜೀನಸುಗಳು ಮನೆ ಖರ್ಚಿಗೆ" ಎಂದಳು

"ಹಂ" ಎಂದೆ

"ಕೆಮ್ಮೆ? ಕಷಾಯ ಮಾಡಲೇ?" ಎಂದು ಪ್ರಶ್ನಿಸಿದಳು

"ಕೆಲವು ಕೆಮ್ಮುಗಳಿಗೆ ಕಷಾಯ ವರ್ಜನವೇ ಪಥ್ಯ—ಕೆಲವಕ್ಕೆ ಹೆಂಡಂದಿರಿಂದ ಸಾವಿರ ಮೈಲು ದೂರವಿರುವುದು ಪಥ್ಯ!" ಎಂದೆ.

"ನನ್ನ ಜನ್ಮದಿನೋತ್ಸವದ ಸಿದ್ಧತೆಯೆಂದು ನೀವು ನಂಜು ಆಡುವುದಕ್ಕೆ ದಾರಿಯೆಲ್ಲಿ? ಕಳೆದ ಏಳು ವರ್ಷಗಳಿಂದ ಜನ್ಮದಿನೋತ್ಸವಕ್ಕೆ ಯತ್ನಿಸಿದವರು ನೀವೇ!"

"ನಿನ್ನ ಸೂಚನೆಯಿಂದ!"

"ಸೂಚನೆಯಿರಲಿ. ಒಂದಾದರೂ ನನ್ನ ಜನ್ಮದಿನೋತ್ಸವವು ಆಚರಿಸಲ್ಪಟ್ಟಿತೇ?"

"ಅದು ನನ್ನ ತಪ್ಪಲ್ಲ ಜನ್ಮದಿನೋತ್ಸವದ ಮೂರು ದಿನಗಳ ಮೊದಲು, ನಿನಗೆ, ಆರ್ಡರ್ ಮಾಡಿದಂತೆ ಜ್ವರ ಬರುವುದೇಕೆ?"

"ಹಾಗಾದರೆ, ಈ ವರ್ಷ, ನಾಳೆಯೇ ಜನ್ಮದಿನೋತ್ಸವ; ಜ್ವರ ಬಂದಿಲ್ಲವೆಂಬ ಸಂತೋಷದಿಂದ ನಾನು ಹೇಳಿದೆ. ಇಷ್ಟು ವರ್ಷಗಳಲ್ಲೂ, ಜ್ವರ ಬಂದರೆ ಮೂರ್ನೇ ದಿನಗಳಲ್ಲಿ ಜನ್ಮದಿನೋತ್ಸವವೆಂದು ನೆನಪಾಗು

ತಿತ್ತು ಈ ವರ್ಷ ಜ್ವರಬಾರದೆನ್ನೇ ನೆನಪಾದುದು ಪುಣ್ಯ ಹೆಂಡತಿಯ ಸ್ವಾಸ್ಥ್ಯ ನೋಡಿ ನಿಮಗೂ ಸಂತೋಷವಾಗಬೇಡವೇ?"

"ನನ್ನ ಆನಂದ ನನ್ನೊಳಗೇ ಇದೆ. ದುಃಖವಾದರೆ ನಾನು ಮಾತೇ ಆಡದೆ ಸಮುದ್ರ ತೀರಕ್ಕೆ ಹೋಗುತ್ತಿದ್ದೆ'' ಎಂದೆ

''ಸೌಖ್ಯವಿದ್ದಾಗ ಜನ್ಮದಿನೋತ್ಸವ ಆಚರಿಸಿದರೂ ಕೇಡೇನು?''

"ಕೇಡಿಲ್ಲ, ಕಳೆದೇಳು ವರ್ಷಗಳ ಜ್ವರಗಳ ಮೇಲೆ ಸೇಡು! ಆಚರಿಸಿಯೇ ಬಿಡೋಣ.'' ಎಂದೆ.

''ಹಾಗಾದರೆ, ಬರೆದು ಕೊಟ್ಟುದನ್ನೆಲ್ಲಾ ತನ್ನಿ! ನೀಲೂ, ಲೀಲೂ, ವಿಲ್ಲೂ ಎಲ್ಲರಿಗೆ ನಾಳೆ ಬರಬೇಕೆಂದು ನಾನೇ ಹೋಗಿ ಹೇಳುತ್ತೇನೆ'' ಎಂದಳು

'ತಥಾಸ್ತು' ಎಂದೆ. ಮೀರೆ ಬರೆದು ಕೊಟ್ಟ ಕೆಟಲಾಗನ್ನು ಪುನಃ ನೋಡಿದೆ. ಎಲ್ಲ ಸಂಧಿಗಳನ್ನು ಹಳೇ ಕಾಗದಗಳಿಂದು ಹರಿದು ಹಾಕಿದ ಯುರೋಪಿನ ಅಹಿಮಹಿಗಳನ್ನು ನೆನಸಿ, ಆ ಕಾಗದವನ್ನು ಮಡಚಿ ಕಿಸೆಯೊಳಗೆ ಇತರ ಬೀಲುಗಳ ಮತ್ತು 'ರಿಜಿಸ್ಟ್ರಿ' ನೋಟೀಸುಗಳ ನಡುವೆಯಿಟ್ಟು, ಆರಾಮ ಕುರ್ಚಿಗೆ ಬಿದ್ದು, ಪೇಪರ್ ತೆರೆದು ಓದಿದೆ ಮೀರೆ ಮಾತಾಡಿದರೆ ಕೆಣಕುವ ಉತ್ತರಗಳನ್ನೆ ಕೊಡುವದೆಂದು ನಿಶ್ಚಯಮಾಡಿಕೊಂಡಿದ್ದೆ. ಮೀರೆ, 'ಗೃಹಿಣಿ' ಪತ್ರಿಕೆಯಲ್ಲಿ ಬಂದ 'ಕೇಕ್'ಮಾಡುವ ವಿಧಾನವನ್ನೋದುತಿದ್ದಳೆಂದು ತೋರುವುದು.

"ಮೂರು ಕೋಳಿ ತತ್ತಿಗಳನ್ನು ಒಡೆದುಹಾಕಬೇಕಂತೆ—ಹಿಟ್ಟಿಗೆ!" ಎಂದಳು.

"ಲಾಹೋರ್ ಬಳಿ ಎಪ್ಪತ್ತು ಸಾವಿರ ಹಿಂದೂಗಳಿಗೂ ಅಷ್ಟೆ ಮುಸ್ಲಿಮರಿಗೂ ಒಂದು ಜೆಂಕಿಪೆಟ್ಟಿಗೆಗಾಗಿ ಜಗಳವಂತೆ" ಎಂದು ನಾನಂದೆ.

"ಅನಂತರ ಮುಕ್ಕಾಲು ಸೇರು ಸಕ್ಕರೆಯನ್ನು ಸೇರಿಸಬಹುದಂತೆ!" ಎಂದು ಮೀರೆ ಮುಂದರಿಸಿದಳು.

"ಇಡೀ ಮೂವರು ಸಬ್ ಇನ್ಸ್‌ಪೆಕ್ಟರರೂ ಇಬ್ಬರು ಸಾರ್ಜಂಟರೂ, ಅವರುಟ್ಟಿದ್ದ ಚಲ್ಲಣಗಳ ಸಹಿತ ಕಾಣೆಯಂತೆ!" ಎಂದು ನಾನೂ ಮುಂದರಿಸಿದೆ.

"ಬಡಶೇಪನ್ನು ಒಂದು ತೊಲೆ ಸೇರಿಸಬಹುದಂತೆ!" ಎಂದಳು ಮೀರೆ.

"ಮಾರ್ಗದಲ್ಲಿ ಕೊಳೆವ ಶವಗಳನ್ನು ರಣಹದ್ದುಗಳು ಮಾತ್ರ ತಿನ್ನು ತ್ತಿವೆಯಂತೆ!" ಎಂದೆ ನಾನು

"ಮನುಷ್ಯರೂ ತಿನ್ನಬಹುದಿತ್ತಲ್ಲ!" ಎಂದು ದಂಗೆಯೆದ್ದಳು ಮೀರೆ.

"ಅದಕ್ಕೆ ಬಡಶೇಪನ್ನೂ ಸಕ್ಕರೆಯನ್ನೂ ಮೊಟ್ಟೆಯನ್ನೂ ಸೇರಿಸಿ ಕೊಡುವ ಕರುಣಾಳು ಹೆಂಗಳೆಯರಿದ್ದಿಲ್ಲವೇನೊ!" ಎಂದು ನಾನು ಸಂದೇಹ ತೆಗೆದೆ.

"ನಾನು ಕೋಳಿ ತತ್ತಿಯ ಸುದ್ದಿ ತೆಗೆವಾಗ ನೀವು ರಣಹದ್ದು ಎಂದಿ ರಲ್ಲ—ಏಕೆ?" ಎಂದಳು.

"ನೀನೂ ಓದಿದೆ, ನಾನೂ ಓದಿದೆ, ಅಷ್ಟೆ" ಎಂದೆ ನಾನು

"ಬಿಡಿರದನ್ನು—ನಾನೂ ಇದನ್ನು ಬಿಟ್ಟು ಮತ್ತೊಂದನ್ನೋದುವೆನು" ಎಂದು ಸೂಚಿಸಿದಳು

ಒಪ್ಪಿದೆ

"ಮನೆಗೊಂದು ಅಜ್ಜಿ ಲೇಸು ಸರ್ವಜ್ಞ!"—ಮೀರೆ ಓದಿದಳು

"ಆದರೆ, ಆಕೆಯು ಗಂಡನ ಅತ್ತೆ ಎಂಬಜ್ಜಿಯಲ್ಲ—" ನಾನೂ ಓದಿದೆ. ಮೀರೆ ಪುನಃ ದಂಗೆಯೆದ್ದಳು. "ಅದು ನಿಮ್ಮ ಪೇಪರಿನಲ್ಲಿರುವುದೇ?"

"ಇಲ್ಲ. ಆದರೆ, ನನ್ನದೊಂದು ಸೂಚನೆ!" ಎಂದೆ

"ನನಗೆ ಸೂಚನೆ ಬೇಡ—ನೀವು ಪೇಪರನ್ನು ಮಾತ್ರ ಓದಿರಿ" ಎಂದಳು.

"ಏನಡ್ಡಿ!" ಎನ್ನುತ್ತ ಆರಂಭಿಸಿದೆ: "ಗಂಡನ ಕೊಲೆ... . ..!"

"ಗಂಡನ ಕೊಲೆ? ಎಲ್ಲಿ?" ಎಂದು ಪ್ರಶ್ನಿಸಿದಳು ಮೀರೆ.

"ಕರಾಚಿಯಲ್ಲೊಂದು-ಮದರಾಸಿನಲ್ಲೈದು-ಬೊಂಬಾಯಿಯಲ್ಲೆಂಟು-ಕಲ್ಕತ್ತದಲ್ಲಿಪ್ಪತ್ತು .......ಮೀರಾ, ನೆಲದಲ್ಲಿ ಗಂಡನ ಕೊಲೆಯೆಂದರೆ, ಸಮುದ್ರ ದಲ್ಲಿ ಮೀನುಗಳ ಕೊಲೆಯಾದಷ್ಟೆ ಸುಲಭ!"

"ಹೆಂಡತಿಯ ಕೊಲೆ ಎಂದಿಲ್ಲವೇ?"

"ಇಲ್ಲ—ಆತ್ಮಹತ್ಯ ಎಂದಿದೆ!"

"ಏಕೆ ಆತ್ಮಹತ್ಯ ಮಾಡಿಕೊಂಡಳಂತೆ?"

"ಗಂಡನನ್ನು ಕೊಂದು!"

"ಅದನ್ನು ನೀವು ಯಾವ ಆಧಾರದ ಮೇಲೆ ಹೇಗೆ ನಂಬುತ್ತೀರಿ?"

"ಹೆಂಡಿರಿಗೆ ಗಂಡರಿರುವರೆಂಬ ಒಂದೇ ಆಧಾರ!"

"ನಾಳೆ ನನ್ನ ಜನ್ಮದಿನೋತ್ಸವ—ಜಗಳ ಬೇಡ!"

"ಯಾರೋ ಯಾರನ್ನೋ ಕೊಂದುದಕ್ಕೆ ನಮಗೆ ಜಗಳ ಖಂಡಿತ ಇಲ್ಲ"

"ಆದರೆ, ನೀವು ಕೆಣಕುತ್ತೀರಿ"

"ಕೇವಲ ಸುದ್ದಿ—ಓದಿದೆ"

"ಶುಭ ದಿನದಲ್ಲಿ ಕೊಲೆಯ ಸುದ್ದಿಯನ್ನೇಕೆ ಓದುತ್ತೀರಿ?"

"ಬೇಡ—ನಿನ್ನ ವಿಷಯವಾಗಿಯೇ ಮಾತಾಡೋಣವಂತೆ. . ...ಈಗ ನೋಡು, ನಾಳೆ ನಿನ್ನ ಜನ್ಮದಿನ—ಒಳ್ಳೆ ದಿನ!" ಎನ್ನುತ್ತ ಕೆಲೆಂಡರ್ ನೋಡಿದೆ.

ಮೈ ಝುಮ್ಮೆಂದಿತು. ತೆಪ್ಪನೆ ಕುಳಿತುಬಿಟ್ಟೆ

ಮೀರೆ, "ಏಕೆ ಮೌನವಾದಿರಿ?" ಎಂದು ಕೇಳಿದಳು

"ಮೀರಾ!"

"ಏನು?"

"ಬೇಸರಪಡಬೇಡ!"

"ಏಕೆ?"

"ಬೇಡ—ಪಡಬೇಡ!"

"ಇಲ್ಲ"

"ಮೀರಾ.. .. "

"ಏನು? ಮಾತಾಡಿ!"

"ಮಾತಾಡುತ್ತೇನೆ ನೋಡು—ಈ ದಿನ ಮಾರ್ಚಿ ತಾರೀಕು ಒಂದಲ್ಲ—ಎಪ್ರಿಲು!" ಮೀರೆ ಸಪ್ಪಗಾದಳು. ಮತ್ತೆ ನಾನೇ ತಪ್ಪಿಸಿದೆ ಯೆಂದಳು. "ಬಾರದ, ಬಂದರೂ ತಿಳಿಯದ, ತಿಳಿದರೂ ಆಚರಿಸಲ್ಪಡ ಲಾರದ ಆ ಜನದಿನವು ಹಾಳಾಗಲಿ!" ಎಂದಳು.

"ಹಾಳಾಗಲಿ ಹೋಳಾಗಲಿ—ಆ ಜನ್ಮದಿನಗಳು ಮೆಲ್ಲನೆ ಬರಲಿ! ಜನ್ಮದಿನಗಳನ್ನಾಚರಿಸುವುದು ಸುಖವಲ್ಲ-ಆಯುಷ್ಯವು ತುಂಬಿ ಬಂತೆಂದು

ನೆನಪು ಕೊಡುವುವು! ನಾವು ಜನ್ಮದಿನಗಳನ್ನಾಚರಿಸದೆ ಮನಸ್ಸಿನಲ್ಲಿ ತರುಣರಾಗಿರೋಣ'' ಎಂದೆ. ಒಪ್ಪಿದಳು.

---

# ೧೪. ವಿಲಾಯತಿ ಕೂಗು

ಸುಪ್ರು ಭಾರೀ ಮನುಷ್ಯ—ಆದರೆ, 'ಸೈಜಿ'ನಲ್ಲಿ ಚಿಕ್ಕವ. ಇನ್ನೂ ಮೂರೇ ವರ್ಷ. ಕೆಲವೇ ವರ್ಷಗಳಲ್ಲಿ ಬೆಳೆದು ಬಲಿಷ್ಠನಾಗಿ, ಹತ್ತೆಂಟು ಇಂಚು ದಪ್ಪದ ಪುಸ್ತಕಗಳನ್ನೋದಿ ಭಾರೀ ಕಾರಭಾರು ಮಾಡಲಿಕ್ಕಿದೆ ಎಂದು ನನ್ನ ಅಜ್ಜಿ ಭವಿಷ್ಯ ಹೇಳುವುದುಂಟು. ಮೊನ್ನೆ ತಾನೆ, ನಾಲ್ಕಂಗುಲ ದಪ್ಪದ ನನ್ನ ಪುಸ್ತಕ (ಕಡ ತಂದದ್ದು) ತೆಗೆದು, ಎರಡು ನಿಮಿಷ ನೋಡಿ, ಇಂತಹ ಗ್ರಂಥಗಳು ತನಗೆ ಗಣ್ಯವೇ ಇಲ್ಲವೆಂಬರ್ಥದಲ್ಲಿ ಹರಿದು ಹಾಕಿದ್ದಾನೆ. "ಇದು ನಮ್ಮ ಕುಲಕ್ಕೇ ಕುಠಾರ" ಎಂದು ನಾನು ಕೋಪದಿಂದ ಒಂದು ಮಾತು ಹೇಳಿದುದಕ್ಕೆ ಅಜ್ಜಿ ರೇಗಿ, "ಕೃಷ್ಣನಂತಹ ಮಗು; ಈಗ ಒಂದು ಪುಸ್ತಕ ಹರಿದರೆ, ದೊಡ್ಡವನಾದ ಮೇಲೆ ಸಾವಿರ ಪುಸ್ತಕ ತರಲಿಕ್ಕಿದೆ" ಎಂದಳು. ಮಿಾರೆ ಅದನ್ನು ಅನುಮೋದಿಸಿದಳು (ತನ್ನ ಹಿರೇ ಮಗಳ ಮನೆಯಿಂದ ಅಜ್ಜಿ ಬಂದು ಇನ್ನೂ ಹದಿನೈದು ದಿನಗಳಾಗಿರಲಿಲ್ಲ. ನಾನು ಮಾತೆತ್ತಲಿಲ್ಲ.)

ಸಾವಿರ ಗ್ರಂಥಗಳನ್ನು ತರುವ ನನ್ನ ಅದ್ಭುತ ಪುತ್ರನನ್ನೊಮ್ಮೆ ನೋಡಿದೆ, ಹರಿದುಬಿದ್ದ ಆ ಪಾಪದ ಪುಸ್ತಕವನ್ನೂ ನೋಡಿದೆ ಮತ್ತೆ ಒಂದು ನಿಟ್ಟುಸಿರಿಟ್ಟು ಸುಪ್ರುವನ್ನು ಕುರಿತು, "ಮಗನೇ, ನೀನು ದೊಡ್ಡವನಾದ ಮೇಲೆ ಸಾವಿರ ಅಲ್ಲ, ಲಕ್ಷ ಗ್ರಂಥ ತಾರಪ್ಪ—ಆದರೆ, ನಿನ್ನ ಕಾಲದಲ್ಲಿ ಯುದ್ಧ ಮಾತ್ರ ಬಾರದಿರಲಿ!" ಎಂದು ಹರಸಿದೆ

ಸುಪ್ರು ಹನುಮಂತನ ಹಾಗೆ ಒಮ್ಮೆ ಬಾಯಿಯಗಲಿಸಿ ಕಿಸಕ್ಕೆಂದು ಹಲ್ಲು ತೋರಿಸಿದ. ಮತ್ತೆ ಹೂಂಕಾರ ಕೊಟ್ಟು ನನ್ನ ಮೇಲೆ ಹಾರಿ ನನ್ನ ಫೌಂಟನ್‌ಪೆನ್ನನ್ನು ಎಳೆದು ನೆಲಕ್ಕೆ ಬಡಿದ ಅಜ್ಜಿಗೆ ಸಂತೋಷವಾಯಿತು. ಮಿಾರೆ ಆನಂದಾತಿಶಯದಿಂದ ಮಗುವನ್ನೆತ್ತಿ ಮುತ್ತಿಟ್ಟಳು ಈ

ರಾಕ್ಷಸ ಕಂಪೆನಿಯಲ್ಲಿ ಇನ್ನೆರಡು ನಿಮಿಷವಿದ್ದರೆ ದೇಹಕ್ಕೂ ಅಪಾಯವಿದೆ ಯೆಂದು ಕಂಡಿತು; ಮೆಲ್ಲಗೆ ಕಾಲ್ತೆಗೆದೆ.

"ಬಿಸ್ಕೂಟು ಡಬ್ಬಿ ಒಂದು ಬೇಕು" ಎಂದಳು ಮೀರಿ

"ವಿಲಾಯ್ತಿ" ಎಂದಳು ಅಜ್ಜಿ "ಬೇರೆ ಬಿಸ್ಕೂಟು ಅವ ತಿನ್ನೋದೆ ಇಲ್ಲ!"

"ಬೀಬೀಬಿ" ಎಂದನು ಸುಪ್ರು ಮೂರು ವರ್ಷಗಳಲ್ಲವನು ಮೂರು ಶಬ್ದ ಕಲಿತು ಸಾವಿರ ಗ್ರಂಥಗಳನ್ನು ಇನ್ನು ಕೆಲವು ಶತಮಾನಗಳಲ್ಲಿ ತರುವ ಸೂಚನೆ ಕೊಡುತ್ತಿದ್ದನು.

ನಾನು 'ಅಡಿಯು ಹಿಂದಿಡೆ ಸ್ವರ್ಗ'ವೆನ್ನುತ್ತ ಒಂದಡಿ ಹಿಂದೆ ಸರಿದೆ.

"ಬೇಗ ತಾ ಮಗು—ವಿಲಾಯಿತಿ, ಏನು!" ಎಂದಳಜ್ಜಿ.

"ಬೀಬೀಬಿ" ಎಂದನು ಪುನಃ ಸುಪ್ರು.

"ತಿಳಿಯಿತು ಹೊರಟೆ" ಎಂದು, ಮತ್ತೊಂದು ಹೆಜ್ಜೆ ಹಿಂದಿಟ್ಟೆ

ಸುಪ್ರು, ನನ್ನ ಕಿಸೆಯೊಳಗಿನ ಆ ಚಿಕ್ಕ ಕಪ್ಪು ವಸ್ತುವಿನ ಮೇಲೆ ದೃಷ್ಟಿಯಿಟ್ಟವನಾಗಿ, ಎರಡನೇ ನೆಗೆತಕ್ಕೆ ಬೆನ್ನು ನೇರಾಗಿ ಮಾಡಿ ಮತ್ತೆ ಮುದುಡಿಕೊಂಡು ಸಿದ್ಧನಾದನು

ಅಡಿಗಶ್ವಮೇಧ ಫಲಕ್ಕಾಗಿ ಹಾರಲು ಹಿಂದೆ ಗೋಡೆ ಮಾತ್ರ ಉಳಿದಿದೆಯೆಂದು ತಿಳಿದು ನಾನು ಟೋಪಿಯನ್ನು ಕೈಯಲ್ಲಿ ಹಿಡಿದು ಓಡಿದೆ.

ಮಿಸ್ಕಿತನು ನಮ್ಮ ಓಣಿಯ ಕಾಲು ಶತಮಾನದ ಬಿಸ್ಕೂಟ್ ಅರಸ. ಕಾಲ ಬದಲಾದರೂ ಮಿಸ್ಕಿತನೂ ಅವನ ಬಿಸ್ಕೂಟುಗಳೂ ಗಿರಾಕಿಗಳೂ ಬದಲಾಗಿರಲಿಲ್ಲ ಇವನಂತೇ ಗಿರಾಕಿಗಳೂ ಚಿರಂಜೀವಿಗಳಾಗಿದ್ದರೆಂಬು ದೊಂದು ಸುಲಕ್ಷಣ. ಅವನ 'ಬೇಕರಿ' ಎಂಬ ಕರಿಗೂಡಿನ ಬಳಿಗೆ ಬಂದು ನಿಂತು, "ಮಿಸ್ಕಿತ್" ಎಂದೆ

ಸ್ವರ ಕೇಳಿ ಹೊರಗೆ ಬಂದು, ಹಿಟ್ಟಿನ ಕೈಯಿಂದ ಮೀಸೆಯ ಮೇಲಿನ ನೊಣ ಓಡಿಸಿ ಮಿಸ್ಕಿತನು, ಬಾಯಿಂದ ಸಲಾಂ ಎನ್ನುತ್ತ ಕೈಗೆ ಕೈತಿಕ್ಕಿ ನೆಲ ನೋಡಿದನು

"ಬಿಸ್ಕಿತ್ತು—ಮಿಸ್ಕಿತ್—ನಾಲ್ಕಾಣೆದು" ಎಂದೆ.

ಮಿಸ್ಕಿತ್ ಕೂಡಲೇ ಮಾಯವಾಗಿ, ಎರಡು ಕ್ಷಣಗಳಲ್ಲಿ ನಾಲ್ಕು ಬಿಸ್ಕುಟುಗಳೊಡನೆ ಹೊರಬಂದನು. ತೆಗೆದುಕೊಂಡೆ. ಮನೆಗೆ ಬಂದೆ.

ಚಿಕ್ಕ ಘಟೋತ್ಕಚನು ಬಾಗಿಲಲ್ಲೆ ಕಾಯುತಿದ್ದನು. ಭಾಷೆ ಬಾರದಿದ್ದರೂ ಈ ಪಂಡಿತಮರಿಗೆ ಯಾ ಮರಿಪಂಡಿತನಿಗೆ ಎಲ್ಲವೂ ತಿಳಿಯುತಿತ್ತು. "ತಕ್ಕೊಳ್ಳಿ ಸ್ವಾಮಿ—ಬಿಸ್ಕುತ್ತು" ಎಂದೆ.

ಸುಪ್ರು ಕೈಚಾಚಿ ನಾಲ್ಕು ಬಿಸ್ಕುಟುಗಳನ್ನೂ ಕೈಗೆ ತೆಗೆದುಕೊಂಡನು. ಅವುಗಳನ್ನೆ ಒಂದರೆಕ್ಷಣ ದಿಟ್ಟಿಸಿದನು. ಮತ್ತೆ, ತನ್ನ ಬಲವನ್ನೆಲ್ಲ ಹಾಕಿ ಕೈಬೀಸಿ ಬಿಸ್ಕೂಟುಗಳನ್ನು ಹೊರಗೆ ಬಿಸುಡಿ, ಶ್ವಾಸಕೋಶಕ್ಕೆ ಬಲವಿದ್ದಷ್ಟು ಗಟ್ಟಿಯಾಗಿ ರೋದನಕ್ಕಾರಂಭಿಸಿದನು

ನನ್ನ ಎದೆ ಧಸಕ್ಕೆಂದಿತು. "ಸುಪ್ರು—ಕೂಗುವನೇ?" ಎನ್ನುತ್ತ ಬಂದಳಜ್ಜಿ ಒಣಗಿದ ಗಂಟಲಿಂದ "ಸುಪ್ರು.......ಕೂಗಿದನಹುದು. ಏಕೋ!" ಎಂದೆ.

"ಮಕ್ಕಳನ್ನು ಕೂಗಿಸಿ ಚಂದ ನೋಡುವುದು ಅವರ ಕ್ರಮ. ಮಗುವಿಗೆ ಪೀಡೆ ಕೊಡುವುದು ಅವರಿಗೆ ಆನಂದ!" ಎಂದು ಒಂದು ಆಕಾಶವಾಣಿಯಾಯಿತು. ಮಿರೆ, ಮಹಡಿಯ ಮೇಲಿಂದ ರೇಡಿಯೋದಲ್ಲಿ ಮಾತಾಡಿದಳೆಂದು ತಿಳಿದು ನನ್ನ ಪೂರ್ಣ ಬಲ ಹೋಯಿತು.

"ಆನಂದ—ಚಂದ—ಮೊದಲಾದುದೇನೂ ಇಲ್ಲವೆನ್ನಿ. ನಾಲ್ಕು ಬಿಸ್ಕೂಟು ..ಅವನಿಗೆ ಬೇಡವೆನಿಸಿತೋ ಏನೋ....ಅಷ್ಟೆ" ಎಂದೆ

ಮಹಡಿಯಿಂದ ವಿಮಾನದಾಳಿ ಸೂಚಕ ಎಚ್ಚರಿಕೆ(ಮಿರೆ)ಯಾಯಿತು ಕೆಳಗೆ ನಾನು ಕುಳಿತಲ್ಲಿ ಟ್ಯಾಂಕು ದಳದ ಅಸ್ತಿತ್ವದ(ಅಜ್ಜಿ)ಅರಿವುಂಟಾಯಿತು "ನೂರಹನ್ನೆರಡು ಮಿಲಿಮಿಟರ್ ಗನ್ನು" (ಜರ್ಮನ್ ಕೋವಿ) ಯಾನೆ ಸುಪ್ರು ಹಾರುವ ಸೂಚನೆಯೂ ಆಯಿತು. ಇನ್ನು ನನಗುಳಿದುದೆಂದರೆ "ಗ್ಲೋರಿಯಸ್ ರಿಟ್ರೀಟ್" ಯಾನೆ "ಪೌರುಷಯುಕ್ತ ಪಲಾಯನ." ಆದರೆ, ಈ ರೀತಿಯ ಮರ್ಯಾದೆಯ ಓಟಗಳಿಂದ ಸಾಕೋ ಸಾಕೆನ್ನಿಸಿತ್ತು ಈಗ ಕಾಲಿಗೆ ಬಲವೂ ಕಾಣಲಿಲ್ಲ ಅಡಿಗಶ್ವಮೇಧ ಫಲವೆನ್ನುತ್ತ ನಿಂತೆ.

ಮಿರೆ ಬಂದಳು. ನಾನವಳ ಮುಖ ನೋಡಲಿಲ್ಲ. ಕಾಲುಗಳನ್ನು

ನೋಡಿದೆ;-ಅವಳದೇ ಕಾಲುಗಳು, ಖಂಡಿತ! ಬಂದವಳೇ, ತಿರಸ್ಕೃತ ಪಲ್ಲೆ ನಾಲ್ಕನ್ನೂ ಹೆಕ್ಕಿ, ಎರಡೂ ಕಡೆ ತಿರುಗಿಸಿ ನೋಡಿದಳು ಮತ್ತೆ ಅಂದಳು:

"ಹಾಗೆ ಹೇಳಿ! ಮಿಸ್ಕಿತ್ ಪಲ್ಲೆ!''.

"ಮಿಸ್ಕಿತ್ ಪಲ್ಲೆ? ವಿಲಾಯ್ತಿ ಅಲ್ಲವೇ?''—ಅಜ್ಜಿ ಗಾಬರಿಯಿಂದ ಕೇಳಿದಳು

"ಶುದ್ಧ ದೇಶಿ! ದೇಶಿ ಮಾತ್ರವಲ್ಲ,—ದೇಶಿಯಲ್ಲಿ ಅತೀ ಕೀಳ್ತರಗತಿಯದು, ಇಲ್ಲೇ ಆಚೆ ಓಣಿಯ ಮಿಸ್ಕಿತನ ಗುಡಿಸಲಿನ ಬೆರಣಿ!'' ಎಂದಳು ಮೀರೆ.

ಸುಪ್ರು ಸ್ಥಿರದೃಷ್ಟಿಯಿಂದ ನನ್ನನ್ನೇ ನೋಡಿ, ಹುಲಿಮರಿಯಂತೆ ಹಾರುವ ದುಶ್ಚಿಹ್ನೆ ತೋರಿದನು ನಾನು, ಫೌಂಟನ್‌ಪೆನ್ನನ್ನು ಹೊರಕಿಸೆಯಿಂದ ಒಳಕಿಸೆಗೆ ವರ್ಗಾಯಿಸಿ, ಒಣಗಿದ ತುಟಿಗಳನ್ನು ನಾಲಗೆಯಿಂದ ನೆನೆಯಿಸಿ, ಸ್ವರ ತೆಗೆದೆ "ಪಲ್ಲೆ ಅಷ್ಟೊಂದು ಹಲ್ಕಿ ಜಾತಿಯಲ್ಲ—ಮಿಸ್ಕಿತನು ಆಶ್ವಾಸನೆ ಕೊಟ್ಟಿದ್ದಾನೆ..... .''

"ಮಿಸ್ಕಿತನ ಮಾತಿಗೆ ಮೂರು ಕಾಸು ಬೆಲೆ. ಈ ಪಲ್ಲೆ ಹಲ್ಕಿ—ಇದನ್ನು ನಮ್ಮ ಮಗು ತಿನ್ನಲಾರದು"—ಎಂದು ಖಂಡಿತವಾಗಿ ಹೇಳಿದಳು ಮೀರೆ

''ಇಸ್ಸಿ—ಮಿಸ್ಕಿತ್ ಪಲ್ಲೆ? ನಮ್ಮ ಮಗು ಇದನ್ನು ತಿನ್ನೋದು ಬಿಟ್ಟು, ನೋಡಲೂ ಇಷ್ಟಪಡಲಾರದು!"—ಅಜ್ಜಿ ತೀರ್ಪು ಹೇಳಿದಳು

''ಪಾವಾಣೆಗೆರಡರಂತಿತ್ತು—ಈಗ ಆಣೆಗೊಂದು.... ...'' —ನಾನು ಯತ್ನಿಸಿದೆ.

''ಆಣೆಗೆ ಹತ್ತಾದರೂ ನಮಗೆ ಬೇಡ ನಮ್ಮ ಮಗು ಇದನ್ನು ತಿನ್ನೋದಿಲ್ಲ. ತರುವುದಾದರೆ ಜೋಸೆಫ್ ಕಂಪೆನಿ ಬಿಸ್ಕುಟು ತನ್ನಿ" ಎಂದಳು ಮೀರೆ.

"ನಿಜ. ಏನು ಮಗು ಅದು—ದೋಸೆ ಕಂಪೆನಿ ಬಿಸ್ಕುಟು—ಅದು ವಿಲಾಯ್ತಿ ಅಲ್ಲವೇ—ಅದೇ ತರಲಿ" ಎಂದಳು ಅಜ್ಜಿ

"ಹೂಂ" ಎಂದನು ಚಿಕ್ಕ ಘಟೋತ್ಕಚ. ಬಾಯಿಬಾರದಿದ್ದರೂ, ನಮ್ಮ ತರ್ಕವೆಲ್ಲ ಅವನಿಗರ್ಥವಾಗುತಿತ್ತು.

ನಾನು ಹನ್ನೆರಡು ಇಂಚು ಹಿಂದೆ ಸರಿದು, ಸ್ವಲ್ಪ ಧೈರ್ಯತಾಳಿ, ಹೇಳಿದೆ: "ಜೋಸೆಫ್ ಎನ್ನುವುದೆಲ್ಲ ಸರಿ. ಆದರೆ, ಅಂಗಡಿಯಲ್ಲಿ ದೊರೆವುದಿಲ್ಲ."

"ಅಂಗಡಿಗೆ ದರಿದ್ರವೆಂಬುದನ್ನು ನಾನು ಕೇಳಿರಲಿಲ್ಲ. ನೀನು ಸಣ್ಣದಿರುವಾಗ ನಾವು ಸಾವಿರ ಡಬ್ಬಿ ತರಿಸಿದ್ದೇವೆ"—ಎಂದಳು ಅಜ್ಜಿ

"ಆಗ ಯುದ್ಧವಿರಲಿಲ್ಲ ಈಗ ಇದೆ. ಸ್ಟೀಮರುಗಳು ಮುಳುಗುತ್ತಿವೆ" ಎಂದೆ

"ಸ್ಟೀಮರ್ ಮುಳುಗಿದರೆ ಬಿಸ್ಕೂಟಿಗೇನು ·ಧಾಡಿ?" ಎಂದು ಕೇಳಿದಳು ಮೀರೆ.

ಪುನಃ ಹೂಂಕರಿಸಿದನು ಕುಲದೀಪಕ

ಮತ್ತೆ ನಾಲ್ಕಂಗುಲ ಹಿಂದೆ ಸರಿದು, ಫೌಂಟನ್‌ಪೆನ್ ಇರಿಸಿದ ಕಿಸೆಯ ಮೇಲೊಂದು ಕೈಯನ್ನಿಟ್ಟು, ಇನ್ನು ಹಿಂದೆ ಸರಿಯಲಾರದೆ, ಗೋಡೆಗೆ ಒರಗಿ ಕುಳಿತೆ. ಮತ್ತೆ ಹೇಳಿದೆ. "ಆ ಬಿಸ್ಕೂಟ್ ಕಂಪೆನಿಯ ಜಾಹೀರಾತಿನಲ್ಲಿ ಚಿತ್ರ ಮಾತ್ರವಿದೆ ಕೆಳಗೆ ಬರೆದಿದ್ದಾರೆ—'ಸ್ಟೀಮರಿನಲ್ಲಿ ಸ್ಥಳ ದೊರೆಯುತ್ತಲೇ ಪುನಃ ಕಳಿಸುವೆವು' ಎಂದು ನಾನೆಲ್ಲಿಂದ ತರಲಿ?"

"ತಾರದಿದ್ದರೆ ಸುಪ್ರು ಅನ್ನಸತ್ಯಾಗ್ರಹ ಮಾಡುತ್ತಾನೆಂ"ದಳು ಮೀರೆ.

"ಮತ್ತೆ ಅವನನ್ನು ಸಮಜಾಯಿಸುವವರು ಈ ಲೋಕದಲ್ಲಿಲ್ಲ" ಎಂದಳು ಅಜ್ಜಿ.

"ಹೂಂ" ಎಂದನು ಸುಪ್ರು

ಅಲ್ಲಿ ದಂಗೆಯೆದ್ದೆ "ಪೇಟೆಯಲ್ಲಿ ದೊರೆಯದ ಬಿಸ್ಕೂಟನ್ನು ನಾನಲ್ಲ, ನನ್ನ ಮಾವನೂ ತರಲಾರ!"—ಎಂದೆ

ಮೀರೆ ಸಿಡಿದೆದ್ದಳು ಅವಳ ಅಪ್ಪನನ್ನು ನಾನು ಬಿಸ್ಕೂಟಿನ ಮೇಲೆ ಆಹ್ವಾನಿಸಿದ ನನ್ನ ಎದೆಗಾರಿಕೆಯನ್ನು ಪ್ರಶ್ನಿಸಿದಳು

"ಬಿಸ್ಕೂಟಿಲ್ಲದಿದ್ದರೆ ಅವಳಪ್ಪನ ವಿಷಯವೆತ್ತಬೇಕೆ?" ಎಂದು ಅಜ್ಜಿ ಒಗ್ಗರಣೆ ಹಾಕಿದಳು.

"ಹೂಂ" ಎನ್ನುತ್ತ ಮೀರೆಯ ವೀರ ಪುತ್ರನು ಯುದ್ಧಸಾರುವ ಚಿಹ್ನೆ ತೋರಿಸಿದ

"ಮದುವೆಯಾದಂದಿನಿಂದ ಇದೇ ರೀತಿ ಬಯ್ಯೋದು—ನನಗೂ ನನ್ನಪ್ಪನಿಗೂ!" ಎನ್ನುತ್ತ ಭೋ ಎಂದು ಮೀರೆ ಅಳಲಾರಂಭಿಸಿದಳು.

"ಅಳಬೇಡ, ಬಂದುದನ್ನು ಸಹಿಸುವುದು. ನಮ್ಮ ಹಣೆಯಲ್ಲಿ ಬರೆದುದನ್ನು ......." ಎಂದು ಪುನಃ ತಣ್ಣಗೆ ನುಡಿದಳು ಅಜ್ಜಿ.

ಚಿಕ್ಕ ಘಟೋತ್ಕಚನು ತಾಯಿ ಅಳುವುದನ್ನು ನೋಡಿ ಥಕ್ಕನೆ ತಾನೂ ಆರಂಭಿಸಿದನು

ಅಜ್ಜಿಗೆ ತಡೆಯಲಿಲ್ಲ. ನಾಲ್ವತ್ತೇಳು ವರ್ಷಗಳ ಹಿಂದೆ ಅವಳ ಗಂಡನೂ ಒಮ್ಮೆ ಹೀಗೆ ನಿಷ್ಠೂರವಾಗಿ ವರ್ತಿಸಿದ್ದನೆಂದು ಅವಳೂ ಕಣ್ಣೀರು ತೆಗೆದಳು

ನೆರೆಕರೆಯ ಸುಂದರಮ್ಮನು ಓಡಿಬಂದು, ಈ ರಖಂ ದುಃಖವೇನೆಂದು ತಿಳಿಯಲಾರದೆ, ಪ್ರಶ್ನಿಸಲೂ ಆರದೆ, ಬೆಪ್ಪಗಾಗಿ ನಿಂತಳು.

ಸುಂದರಮ್ಮನ ಮನೆಗೆ ಹಾಲಿಗಾಗಿ ಬಂದ ಶಾಂತೇರಮ್ಮನು ಅವಳನ್ನು ಹುಡುಕಿ ಇತ್ತ ಬಂದು, ತಾನೂ ನಿಂತಳು.

ಐದು ನಿಮಿಷದೊಳಗೆ ಹತ್ತೆಂಟು ಮಂದಿ ನೇರಿದರು ನಾನಿನ್ನೂ ಮೂಕನಾಗಿ ನೋಡುತಿದ್ದೆ ಗುಂಪು ಬೆಳೆದು ನನ್ನ ಮೇಲೆ ಸಾಮುದಾಯಿಕ ಅಭಿಯೋಗವಾಗುವುದೇ?

ಮೊದಲು ತನ್ನ ಸ್ವರವನ್ನು ಕಂಡು ಪ್ರಯೋಗಿಸಿದವಳು ಸುಂದರಮ್ಮ "ಏನು ಮೀರಾ, ಏನಾಯಿತು? ತವರುಮನೆಯಲ್ಲಿ.. ."

ಮೀರೆ ಉತ್ತರಕೊಡಲಿಲ್ಲ ತವರುಮನೆಯೆನ್ನುತ್ತಲೇ ಇನ್ನೂ ಕಳವಳ ಹೆಚ್ಚಿ, ಅಳುವನ್ನು ಮೇಲ್ಮಟ್ಟಕ್ಕೊಯ್ದಳು

ಅಜ್ಜಿಯಂದಳು "ಬಿಸ್ಕೂಟು—ಒಂದು ಬಿಸ್ಕೂಟು—ವಿಲಾಯ್ತಿ—ಎಂದರೆ... ದೇವಾ!"

ಸುಂದರಮ್ಮನಿಗೆ ಅರ್ಥವಾಗಲಿಲ್ಲ.

"ಹಾಗೆಂದರೆ?"

"ಅಯ್ಯೋ, ಅವಳನ್ನು ಇನ್ನೂ ತಿವಿವಂತೆ ಮಾತಾಡಬೇಡಿ. ಒಂದು ವಿಲಾಯ್ತಿ ಬಿಸ್ಕೂಟ್ ತಾ ಎಂದುದಕ್ಕೆ ಮಗುವನ್ನು ಕೂಗಿಸಿ, ಅವಳ

ತವರುಮನೆಯುವರನ್ನು ಬಯ್ದು ಇವ..........." ಇತ್ಯಾದಿ (ಅಜ್ಜಿ, ನನ್ನ ಕಡೆಗೆ ಬೆರಳಿಟ್ಟು ಗೋಳಾಡಿದಳು )

ನಾನು "ಹಾಗಲ್ಲ, ಸತ್ಯ ಸ್ಥಿತಿಯೇನೆಂದರೆ........" ಎಂದು ವಿವರಿಸ ಹೋದೆ ಅಷ್ಟರಲ್ಲಿ ಶಾಂತೇರಮ್ಮನು ಮುಂದೆ ಬಂದು, "ಎಷ್ಟೆಂದರೂ ನಿನ್ನ ಹೆಂಡತಿ—ಮತ್ತೆ ಅದು ಮಗು, ಮುದ್ದುಮುದ್ದು ಮಕ್ಕಳನ್ನು ಹೊಡೆದು, ಹೆಂಡತಿಗೆ ಒದೆಕೊಟ್ಟು ಗೋಳಾಡಿಸುವುದೆಂದರೆ ... ....." ಎಂದಳು

"ಹೆಂಡಿರು—ಮಕ್ಕಳನ್ನು ಚಿತ್ರಹಿಂಸೆಯಿಂದ ಪೀಡಿಸುವುದು ಈಗೀಗ ವಿಪರೀತವಾಗುತ್ತಿದೆ" ಎಂದು ಸುಂದರಮ್ಮ ತನ್ನ ಅಭಿಪ್ರಾಯ ಹೇಳಿದಳು

ನಾನು ಎರಡನೇ ಯತ್ನಮಾಡಿದೆ "ಸತ್ಯವಾಗಿಯೂ ಪೀಡೆ . "

"ಪೀಡೆಯಲ್ಲಿ ಸುಳ್ಳೇ ಇಲ್ಲ" ಎಂದಳು ಶಾಂತೇರಮ್ಮ

"ಹೊಡೆದು ಒಪ್ಪುವುದು, ಕನಿಕರೆ ಪಡದೆ ಪುನಃ ಹೇಳುವುದು—ಮಹಾಪಾಪ" ಎಂದು ಕಾಮಾಕ್ಷಿಯು ಒಂದು ಬಾಣ ಎಸೆದಳು

"ಮತ್ತೆ ಕೊಂಗ್ರೆಸ್ಸಂತೆ—ಅಹಿಂಸೆಯಂತೆ!" ಎಂದಳು ವೇದಾವತಿ.

ನನ್ನ ತಲೆ ಗರಗಸದಲ್ಲಿಟ್ಟಂತಾಯಿತು ನನ್ನ ಮನೆಗೆ ಬಂದು, ನಿಂತಲ್ಲೆ ದಸ್ತಗಿರಿಮಾಡಿ, ನನ್ನ ಮೇಲೆ ಆಪಾದನೆ ಹೊರಿಸಿ, ವಿಚಾರಣೆಯಿಲ್ಲದೆ ತೀರ್ಮಾನಗಳನ್ನು ಹೇಳುವ ಈ ಹೆಣ್ಣುಗಳು........ಇವರದೊಂದು ಪೋಲೀಸ್ ಫೌಜು ರಚಿಸುವರಂತಲ್ಲ—ಲೋಕದ ಗತಿಯೇನು ಮುಂದೆ!—ಎನಿಸಿತು ನಾಗಾಲೋಟದಿಂದ ಮನೆಬಿಟ್ಟು ಓಡೋಣವೆನಿಸಿತು.

ಅಷ್ಟರಲ್ಲಿ, "ಒಹೋ, ಹೋ—ಏನಿದು ಕೂಟ—ಸ್ತ್ರೀಯರ ಕಾಟ—ಗೋಕುಲದ ಕೃಷ್ಣನಂತೆ ನಡುವೆ ನಿಂತು ಪಾಟ—ನೋಡತಕ್ಕ ನೋಟ!" ಎನ್ನುತ್ತ ಬಂದನು, ಕೀಣು. ಹೆಣ್ಣು ಪೋಲೀಸ್ ಫೌಜು ಅವಾಕ್ಕಾಯಿತು

ಹೋದ ಜೀವ ಬಂದಂತಾಗಿ, ಆನಂದಾತಿಶಯದಿಂದ ಕೀಣುವಿನ

ಬಾಹುಗಳಿಗೆ ಹಾರಿದೆ. ಹೆಣ್ಣು ಪೋಲೀಸ್ ಫೌಜು ಅವಾಕ್ಕಾಯಿತು, ಪುನಃ.

ಕೀಣು ಮೊದಲು ಗಾಬರಿಗೊಂಡ. ಮತ್ತೆ, "ಏನು? ಅಸ್ಪಷ್ಟ?" ಎಂದು ಕೇಳಿದ

"ಅಹುದು—ಥರ್ಮಾ ಮೀಟರ್ ಒಡೆವಷ್ಟು ಉಷ್ಣ—ಇಲ್ಲಿ ನಿಂತರೆ ಎಂದೆ.

"ವಿಷಯವೇನು?"

"ವಿಷಯ—ಎಲ್ಲಿ ವಿಷ! ಇನ್ನು ಇಲ್ಲಿ ಎರಡು ಕ್ಷಣ ನಿಂತರೆ, ನೀನು ಬ್ಹಾರಿದಿದ್ದರೆ ನಾನು ಸಾಯಬಹುದು!"

"ಹೇಗೆ?"

"ಜೀವ ಹಾರಿ!"

"ಜೀವ ಹೇಗೆ ಹಾರೀತು?"

"ಮಸ್ತಕ ಒಡೆದು—ಎದೆಗುಂಡಿಗೆ ನಿಂತು "

"ಏಕೆ ನಿಲ್ಲುವುದು?"

"ಏಕೆ ನಿಲ್ಲದಿರುವುದು?"

"ಅರ್ಥವಾಗುವುದಿಲ್ಲ."

"ಹಾಗಾದರೆ ಇಬ್ಬರೂ ಸಾಯೋಣ."

"ಬಾ"—ಎನ್ನುತ್ತ, ಕೀಣು ನನ್ನನ್ನೆಳೆದು ಹೊರಕ್ಕೊಯ್ದನು ಕತೆ ಯೇನೆಂದು ಹೇಳಿದೆ.

"ಅಷ್ಟೆಯೇನು?" ಎನ್ನುತ್ತ ನನ್ನನ್ನು ಅಂಗಡಿಗೆ ಕರೆದೊಯ್ದು, ಹಳೆ ಜೊಸೆಫ್ ಡಬ್ಬಿಯಲ್ಲಿ ಹೊಸ ಮಿಸ್ಕಿತ್ ಪಲ್ಲೆಗಳನ್ನು ಸಾಲಾಗಿರಿಸಿ, ಹೊರಗೆ ಕಾಗದ ಹಚ್ಚಿಕೊಟ್ಟ; ಮತ್ತೆ ಹೇಳಿದ: "ಅಭ್ಯಾಸ ಕೆಟ್ಟದು ಮಕ್ಕಳಿಗೆ ವಿದೇಶೀ ಅಭ್ಯಾಸ ಮಾಡಿಸಬೇಡ. ನಿನಗೆ ಗೊತ್ತಿದೆ—ಆಗಾಗ ಯುದ್ಧ ಮಾಡಿಕೊಂಡು ಅವರೆಲ್ಲ (ವಿದೇಶೀಯರು) ನಮಗೆ ಬರುವ ಬಿಸ್ಕೊಟನ್ನು ಅಲ್ಲಿ ತಾವೇ ತಿನ್ನುತ್ತಾರೆ. ಅವರೂ ಹಾಗೇ ಮಾಡುತ್ತಾರೆ. ಗೋದಿ ನಮ್ಮದು—ಹೊರಗಿನ ಡಬ್ಬಿ ಅವರದು "

ಕೀಣುವನ್ನು ಗೌರವಪೂರ್ಣ ದೃಷ್ಟಿಯಿಂದ ನೋಡಿದೆ. ಚಂದ್ರನಿ

ಗಾಗಿ ಅಳುವ ರಾಮಚಂದ್ರನಿಗೆ ಕನ್ನಡಿ ಕೊಟ್ಟು ಕಣ್ಣೀರು ನಿಲ್ಲಿಸಿದ ಸುಮಂತನ ನೆನಪಾಯಿತು. ಅವನಿಗೆ ಕೃತಜ್ಞತೆ ಸಲ್ಲಿಸಲು, ಸಂತೋಷದ ಭರದಲ್ಲಿ ಬಾಯಿಬಾರದೆ, ನೆಟ್ಟಗೆ ಮನೆಗೆ ನಡೆದೆ.

ಸುಪ್ರು ಡಬ್ಬಿ ನೋಡಿ ನಲಿದ; ಮಿಠಿರೆ 'ನಾನು ಹೇಳಿರಲಿಲ್ಲವೆ ಸಿಗುತ್ತದೆಂದು' ಎಂದಳು. ಅಜ್ಜಿ ಸುಪ್ರುವನ್ನೆತ್ತಿ, ಅರ್ಧ ಡಬ್ಬಿ ತಿನ್ನಿಸಿ, "ಇನ್ನು ನಾಳೆ!" ಎಂದು ಘಟೋತ್ಕಚನಿಗೆ ಹಿತವಚನ ಹೇಳಿದಳು

ಸುಪ್ರುವಿಗೀಗ ಮಿಸ್ಕಿತ್ ಪಲ್ಲೆ ವಿನಹ ಬೇರಾವ ಬಿಸ್ಕೂಟೂ ಸೇರದು ಡಬ್ಬಿ ಮಾತ್ರ ವಿಲಾಯ್ತಿ ಬೇಕು